KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೩ | ಬೆಂಗಳೂರು, ಗುರುವಾರ, ಮಾರ್ಚ್ ೨೦, ೨೦೦೮ (ಫಾಲ್ಗುಣ ೩೦, ಶಕ ವರ್ಷ ೧೯೨೯) | ಸಂಚಿಕೆ ೧೨ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎಸ್. ಶ್ರೀನಿವಾಸಮೂರ್ತಿ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ಪೇಟೆ, ಮಂಡ್ಯ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ/ ಮೈವಿ 57: 2003–04, ದಿನಾಂಕ 18–9–2007.

**ಪ್ರಸ್ತಾವನೆ :**

ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಡಾ: ಎಸ್. ಶ್ರೀನಿವಾಸಮೂರ್ತಿ, ವೈದ್ಯಾಧಿಕಾರಿ ಇವರು ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ಪೇಟೆ, ಮಂಡ್ಯ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ 16–10–2003 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರಿಗೆ ಕರ್ತವ್ಯಕ್ಕೆ ಹಾಜರಾಗಲು ಕರೆನೋಟೀಸ್ ಜಾರಿ ಮಾಡಿದ್ದು ಸ್ವೀಕೃತಿಯು ಅಂಚೆ ಕಚೇರಿಯಿಂದ ಹಿಂದಿರುಗಿ ಬಂದ ಕಾರಣ ದಿನಾಂಕ 27–7–2005ರ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ಕೆಲಸಕ್ಕೆ ಹಾಜರಾಗುವಂತೆ ಪ್ರಕಟಿಸಿದ್ದರೂ ಸಹಾ, ಸದರಿ ಅಧಿಕಾರಿಯು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಆದ್ದರಿಂದ ಸದರಿ ವೈದ್ಯರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಗಳು 1977ರ ನಿಯಮ 6ರ ಅಡಿಯಲ್ಲಿ ಶಿಸ್ತುಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿಯವರನ್ನು ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 685 ಹೆಚ್‌ಎಸ್‌ಹೆಚ್ 2007 ಬೆಂಗಳೂರು, ದಿನಾಂಕ: 1ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಎಸ್. ಶ್ರೀನಿವಾಸಮೂರ್ತಿ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್. ಪೇಟೆ, ಮಂಡ್ಯ ಜಿಲ್ಲೆ ಇವರು ದಿನಾಂಕ 16–10–2003ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ಉಪ ನಿಯಮ 6(1)(2)ರ ಅಡಿಯಲ್ಲಿ ದಿನಾಂಕ 16–10–2003ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 117

**ಕೆ.ಎಸ್. ಸರೋಜಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಆರ್ಥಿಕ ಸಚಿವಾಲಯ**

**ವಿಷಯ :** ವಿಶೇಷ ಭತ್ಯೆಯ–ಪರಿಷ್ಕರಣೆ ಮತ್ತು ದರಗಳ ತರ್ಕ ಸಮ್ಮತ ನಿಗದಿ–ಕೆಲವು ಪ್ರಕರಣಗಳಲ್ಲಿ ವಿಶೇಷ ಭತ್ಯೆ ಮಂಜೂರಾತಿ/ಮುಂದುವರಿಕೆ–ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** 1. ಆದೇಶ ಸಂಖ್ಯೆ ಆಇ 13 ಎಸ್‌ಆರ್‌ಪಿ 2000(1) ದಿನಾಂಕ 9–6–2005.
2. ಆದೇಶ ಸಂಖ್ಯೆ ಆಇ 27 ಎಸ್‌ಆರ್‌ಪಿ 2006 ದಿನಾಂಕ 21–11–2006.
3. ಆದೇಶ ಸಂಖ್ಯೆ ಆಇ 27 ಎಸ್‌ಆರ್‌ಪಿ 2006 ದಿನಾಂಕ 5–12–2006.

**ಸರ್ಕಾರಿ ಆದೇಶ ಸಂಖ್ಯೆ: ಆಇ 27 ಎಸ್‌ಆರ್‌ಪಿ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2008.**

ಮೇಲೆ (3)ರಲ್ಲಿ ಓದಲಾದ ದಿನಾಂಕ 5–12–2006ರ ಆದೇಶವನ್ನು ಮುಂದುವರೆಸುತ್ತಾ, ಮೇಲೆ (1), (2) ಮತ್ತು (3)ರಲ್ಲಿ ಓದಲಾದ ದಿನಾಂಕ 9–6–2005, 21–11–2006 ಮತ್ತು 5–12–2006ರ ಆದೇಶಗಳನ್ನು ಈ ಕೆಳಗೆ ಸೂಚಿಸಿರುವಷ್ಟು ಮಟ್ಟಿಗೆ ಮಾರ್ಪಡಿಸಲು ಸರ್ಕಾರವು ಹರ್ಷಿಸುತ್ತದೆ.

ಕ್ರಮ ಸಂಖ್ಯೆ 26(2)(ii)ರಲ್ಲಿ "ಸಿಆಸುಇ (ಲೆಕ್ಕಪತ್ರ–1)" ಶೀರ್ಷಿಕೆಯಲ್ಲಿನ ನಮೂದುಗಳಲ್ಲಿ (f) ನಂತರ ಈ ಕೆಳಗಿನ ನಮೂದನ್ನು [f(i)] ಎಂದು ಸೇರಿಸಿಕೊಳ್ಳತಕ್ಕದ್ದು.

f(i) ಜಮೇದಾರ (ಲೆಕ್ಕಪತ್ರ–1) 1 ಹುದ್ದೆ

ಈ ಆದೇಶಗಳು 1ನೇ ಜೂನ್ 2005ರಿಂದ ಜಾರಿಗೆ ಬರತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 129

**ಸುಂದರ ರಾಜ ಗುಪ್ತ**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ವೀಣಾ ಕೆಂಚಪ್ಪನವರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಃ: ಡಿಪಿಜಿ/ ಬೆವಿ/ ಹಾ/3/2006–07, ದಿನಾಂಕ 25–7–2007.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಡಾ: ವೀಣಾ ಕೆಂಚಪ್ಪನವರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕುಪ್ಪೆಲೂರು, ರಾಣೆಬೆನ್ನೂರು ತಾಲ್ಲೂಕು, ಹಾವೇರಿ ಜಿಲ್ಲೆ ಇವರು ದಿನಾಂಕ 3–11–2004ರಿಂದ ಖಾಯಂ ವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದು ದಿನಾಂಕ: 1–7–05ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆಂದು ತಿಳಿಸುತ್ತಾ, ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿಯಾಗಿ ಕರ್ತವ್ಯ ಲೋಪ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977ರ ಉಪ ನಿಯಮ 6ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಕೋರಿರುತ್ತಾರೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 589 ಹೆಚ್‌ಎಸ್‌ಹೆಚ್ 2007 ಬೆಂಗಳೂರು, ದಿನಾಂಕ: 1ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ವೀಣಾ ಕೆಂಚಪ್ಪನವರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕುಪ್ಪೆಲೂರು, ರಾಣೆಬೆನ್ನೂರು ತಾಲ್ಲೂಕು, ಹಾವೇರಿ ಜಿಲ್ಲೆ ಇವರು ದಿನಾಂಕ 1–7–2005 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ 1–7–2005 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 118

**ಕೆ.ಎಸ್. ಸರೋಜಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

ವಿಷಯ : ಡಾ: ಎನ್. ಬಾಲನಾಗಮ್ಮ, ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ಬಗ್ಗೆ.

ಓದಲಾಗಿದೆ:
1. ಆಯುಕ್ತರ ನೋಟೀಸ್ ಸಂಖ್ಯೆ: ಡಿಪಿಜಿ (1) ಕೋ-6/2002-03 ದಿನಾಂಕ 6-9-2002.
2. ಡಾ: ಎನ್. ಬಾಲನಾಗಮ್ಮ, ಇವರ ರಕ್ಷಣಾ ಹೇಳಿಕೆ ದಿನಾಂಕ 20-9-2002.
3. ಆಯುಕ್ತರ ಆದೇಶ ಸಂಖ್ಯೆ: ಡಿಪಿಜಿ (1) ಕೋ-6/ 2002-03, ದಿನಾಂಕ 11-3-2003.
4. ಮುಖ್ಯ ಜಾಗೃತಾಧಿಕಾರಿ, (ಜಾಕೋ), ಆಕುಕ. ಸೇವೆಗಳು ಇವರ ವಿಚಾರಣಾ ವರದಿ ದಿನಾಂಕ 1-2-2006.
5. ಆಯುಕ್ತರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ (1) ಕೋ-6/ 2002-03 ದಿನಾಂಕ 6-3-2006.
6. ಡಾ: ಎನ್. ಬಾಲನಾಗಮ್ಮ, ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ 8-5-2006.
7. ಪತ್ರ ಸಂಖ್ಯೆ: ಡಿಪಿಜಿ (1) ಕೋ-6/2002-03 ದಿನಾಂಕ 11-10-2006.
8. ಸರ್ಕಾರದ ಪತ್ರ ಸಂಖ್ಯೆ: ಆಕುಕ 50 ಎಂಎಸ್ಎ 2004, ದಿನಾಂಕ 22-3-2007.
9. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 10 ಸಿಎನ್‌ಎಸ್ ದಿನಾಂಕ: 24-4-2007

ಪ್ರಸ್ತಾವನೆ :

ಡಾ: ಎನ್. ಬಾಲನಾಗಮ್ಮ, ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ "ಐಸಿಡಿಎಸ್" ಅನುದಾನ ರೂ. 1,50,000/- (ಒಂದು ಲಕ್ಷದ ಐವತ್ತು ಸಾವಿರ ಮಾತ್ರ) ಗಳನ್ನು ಕಾರ್ಯನಿರ್ವಹಣಾಧಿಕಾರಿಗಳು, ತಾಲ್ಲೂಕು ಪಂಚಾಯತ್, ಬಂಗಾರಪೇಟೆ ಇವರು ದಿನಾಂಕ 22-3-2001ರಂದು ಸದರಿ ಹಣವನ್ನು ಈ ಕಛೇರಿಗೆ ಬಿಡುಗಡೆ ಮಾಡಿದ್ದು, ಈ ಹಣವನ್ನು ತಮ್ಮ ಕಛೇರಿಯ ಡಿ.ಸಿ.ಬಿಲ್. ಸಂಖ್ಯೆ 57/2000-01, ದಿನಾಂಕ 22-3-2001ರ ಪ್ರಕಾರ ಉಪ ಖಜಾನೆ, ಬಂಗಾರಪೇಟೆ ಮೂಲಕ ಪಡೆದಿದ್ದು, ಸದರಿ ಹಣದಿಂದ ಔಷಧಿಗಳನ್ನು ಖರೀದಿಸುವಾಗ, ಆರ್ಥಿಕ ಸಂಹಿತೆಯನ್ನು ನಿಗದಿಪಡಿಸಲಾದ ಕಾರ್ಯವಿಧಾನಗಳನ್ನು ಪಾಲಿಸದೇ ಮೇಲಾಧಿಕಾರಿಗಳ ಅನುಮತಿ ಸಹ ಪಡೆಯದೇ ತಮ್ಮ ಅಧಿಕಾರ ವ್ಯಾಪ್ತಿ ಮೀರಿ ದುರ್ನಡತೆ ಎಸಗಿರುತ್ತಾರೆಂಬ ಆರೋಪಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರು ಸದರಿ ಅಧಿಕಾರಿಗೆ ಜಾರಿ ಮಾಡಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಸದರಿ ಕಾರಣ ಕೇಳುವ ನೋಟೀಸಿಗೆ ಆಪಾದಿತ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ಪತ್ರದಲಿ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲಾಗಿದ್ದು, ತಮ್ಮ ಮೇಲಿನ ಆರೋಪವನ್ನು ನಿರಾಕರಿಸಿದ್ದರು. ಆರೋಪಿತ ಅಧಿಕಾರಿಯು ತಮ್ಮ ರಕ್ಷಣಾ ಹೇಳಿಕೆಯಲ್ಲಿ ನೀಡಿರುವ ಕಾರಣಗಳು ತೃಪ್ತಿಕರವಾಗಿಲ್ಲದ ಕಾರಣ, ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರು ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ಗುರಿಪಡಿಸಲು ನಿರ್ಧರಿಸಿ, ಮುಖ್ಯ ಜಾಗೃತಾಧಿಕಾರಿ (ಜಾಕೋ) ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ವಿಷಯವನ್ನು ಮಂಡಿಸಲು ಆಡಳಿತಾಧಿಕಾರಿ (ಸಾರಿಗೆ), ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ, ಮೇಲೆ (4)ರಲ್ಲಿ ಓದಲಾದ ಪತ್ರದ ಮೂಲಕ ವಿಚಾರಣಾ ವರದಿಯನ್ನು ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರಿಗೆ ಸಲ್ಲಿಸಿರುವರು. ಸದರಿ ವಿಚಾರಣಾ ವರದಿಯಲ್ಲಿ ಆಪಾದಿತ ವೈದ್ಯರು ಯಾವುದೇ ಆರ್ಥಿಕ ಸಂಹಿತೆಯ ಹಣಕಾಸಿನ ಔಚಿತ್ಯ ಸೂತ್ರಗಳನ್ನು ನಿಯಮಗಳನ್ನು ತಮಗಿರುವ ಪ್ರತ್ಯಾಯೋಜಿತ ಆರ್ಥಿಕ ಅಧಿಕಾರವನ್ನು, ಚಾಲ್ತಿಯಲ್ಲಿರುವ ಎಂ.ಸಿ.ಇ. ಖರೀದಿ ನಿಯಮಗಳನ್ನು, ಸರಕು ಸೇವೆ ಖರೀದಿ ಪಾರದರ್ಶಕ ನಿಯಮಗಳ ಎಲ್ಲಾ ವಿಧಾನಗಳನ್ನು ಅನುಸರಿಸದೇ ಏಕಾಏಕಿ ಮೆಸರ್ಸ್, ಜಿ.ಪಿ. ಮೆಡಿಕಲ್ಸ್, ಬೇತಮಂಗಲ, ಇವರಿಂದ ರೂ. 1.50 ಲಕ್ಷ ರೂಪಾಯಿಗಳಿಗೆ ಔಷಧಿ ಇತ್ಯಾಧಿ ಸಾಮಗ್ರಿಗಳನ್ನು ಖರೀದಿಸಿರುವುದು, ಕ್ಯಾಷ್ ಬಿಲ್ಲುಗಳ ಪರಿಶೀಲನೆಯಿಂದ ಕಂಡು ಬರುತ್ತದೆ. ಇದರಿಂದ ಇವರು ಔಷಧಿ ಖರೀದಿ ವಿಧಿ ವಿಧಾನಗಳ ನಿಯಮಗಳ ಉಲ್ಲಂಘನೆಯಾಗಿ ದುರ್ನಡತೆ ಎಸಗಿದ್ದಾರೆಂಬುದು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ.

ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದು ಎಂಬ ಬಗ್ಗೆ ಹೇಳುವುದು ಏನಾದರೂ ಇದ್ದಲ್ಲಿ ಈ ನೋಟೀಸ್ ತಲುಪಿದ 15 ದಿನಗಳೊಳಗಾಗಿ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಆದೇಶಿಸಿ, ಆಯುಕ್ತರು ಮೇಲೆ (5)ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ವಿಚಾರಣಾ ವರದಿಯ ಪ್ರತಿಯೊಂದಿಗೆ ಆಪಾದಿತರಿಗೆ ಜಾರಿಗೊಳಿಸಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ಡಾ: ಎನ್. ಬಾಲನಾಗಮ್ಮರವರು ತಮಗೆ ಇಬ್ಬರು ಅವಿವಾಹಿತ ಹೆಣ್ಣು ಮಕ್ಕಳಿದ್ದು, 4½ ವರ್ಷಗಳ ಸೇವೆ ಬಾಕಿ ಇರುತ್ತದೆ ಎಂದು, ಹಾಗೂ ತಮಗೆ ವ್ಯಾಸ್ಕುಲರ್ ಬೈಪಾಸ್ ಸರ್ಜರಿಯಾಗಿದ್ದು, ಮಧುಮೇಹ ಖಾಯಿಲೆಯಿಂದ ಬಳಲುತ್ತಿರುವುದಾಗಿ ತಮ್ಮ ಕರ್ತವ್ಯದ ಅವಧಿಯಲ್ಲಿ ಸರ್ಕಾರಕ್ಕೆ ಆಗಲೀ, ರೋಗಿಗಳಿಗಾಗಲೀ, ಯಾವುದೇ ತೊಂದರೆ, ಮೋಸ ಮಾಡದೆ ಕರ್ತವ್ಯ ಮಾಡಿರುತ್ತೇನೆಂದು ತಮ್ಮ ಕರ್ತವ್ಯದಲ್ಲಿ ಇನ್ನು ಮುಂದೆ ಈ ತರಹದ ಯಾವುದೇ ಪ್ರಕರಣಗಳು ಬಾರದಂತೆ ಕಾರ್ಯಭಾರವನ್ನು ನಿರ್ವಹಿಸುತ್ತೇನೆಂದು, ಈ ಪ್ರಕರಣದಲ್ಲಿ ಯಾವುದಾದರೂ ತಪ್ಪಾಗಿದ್ದರೆ ಕ್ಷಮಿಸಬೇಕೆಂದು ಕೋರಿದ್ದಾರೆ.

ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರುರವರು ಆಪಾದಿತ ವೈದ್ಯರು ನೀಡಿರುವ ರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಲಾಗಿ, ಅವರು ನೀಡಿರುವ ಹೇಳಿಕೆಯಲ್ಲಿನ ಅಂಶಗಳು ಅಂಗೀಕಾರಕ್ಕೆ ಅರ್ಹವಲ್ಲದ್ದರಿಂದ ಹಾಗೂ ವಿಚಾರಣಾ ಪ್ರಾಧಿಕಾರಿಗಳ ವಿಚಾರಣೆಯಲ್ಲಿನ ನಿರ್ಣಯದಲ್ಲಿ ನೀಡಿರುವ ಅಭಿಪ್ರಾಯದಲ್ಲಿನ ಅಂಶಗಳನ್ನು ಆಧರಿಸಿ, ಸದರಿ ಆರೋಪಿತ ಅಧಿಕಾರಿಯು ಔಷಧಿ ಖರೀದಿಯಲ್ಲಿ ನಿಯಮಗಳ ಉಲ್ಲಂಘನೆ ಆಗಿರುವುದು, ಔಷಧಿ ವಿತರಣೆ ಆಗಿಲ್ಲದಿರುವುದು ಸರ್ಕಾರಿ ಹಣ ದುರುಪಯೋಗವಾಗಿರುವುದು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ, ಸದರಿ ಆರೋಪಿತ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 8 (v to viii)ರಲ್ಲಿನ ಯಾವುದಾದರೂ ದಂಡನೆಯನ್ನು ಸರ್ಕಾರದ ಹಂತದಲ್ಲಿ ವಿಧಿಸಲು ಶಿಫಾರಸ್ಸು ಮಾಡಿರುವರು.

ಡಾ: ಎನ್. ಬಾಲನಾಗಮ್ಮರವರು ನೀಡಿರುವ ರಕ್ಷಣಾ ಹೇಳಿಕೆಯಲ್ಲಿ ತಮ್ಮ ಕರ್ತವ್ಯದ ಅವಧಿಯಲ್ಲಿ ಸರ್ಕಾರಕ್ಕಾಗಲೀ, ರೋಗಿಗಳಿಗಾಗಲೀ, ಯಾವುದೇ ತೊಂದರೆ ಮೋಸ ಮಾಡದೆ ಕರ್ತವ್ಯ ಮಾಡಿರುತ್ತೇನೆಂದು ಹೇಳಿಕೆ ನೀಡಿದ್ದು, ಅದನ್ನು ಒಪ್ಪಲು ಸಾಧ್ಯವಿರುವುದಿಲ್ಲ. ಸದರಿ ಅಧಿಕಾರಿಯು ಈ ಪ್ರಕರಣದಲ್ಲಿ ಆರ್ಥಿಕ ಸಂಹಿತೆಯನ್ನು ಹಣಕಾಸಿನ ಔಚಿತ್ಯ ಸೂತ್ರಗಳನ್ನು ನಿಯಮಗಳನ್ನು, ಸರಕು ಸೇವೆ ಖರೀದಿ ಪಾರದರ್ಶಕ ನಿಯಮಗಳ ವಿಧಿವಿಧಾನಗಳನ್ನು ಅನುಸರಿಸದೇ ಏಕಾಏಕಿ ಮೆಸರ್ಸ್, ಜಿ.ಪಿ. ಮೆಡಿಕಲ್ಸ್, ಬೇತಮಂಗಲ, ಇವರಿಂದ ರೂ. 1.50 ಲಕ್ಷ ರೂಪಾಯಿಗಳಿಗೆ ಔಷಧಿ ಇತ್ಯಾದಿ ಸಾಮಗ್ರಿಗಳನ್ನು ಖರೀದಿಸಿರುವುದು, ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ, ಸದರಿ ಅಧಿಕಾರಿಯವರಿಂದ ದುರುಪಯೋಗವಾದ ಸರ್ಕಾರದ ಹಣ ರೂ. 1.50 ಲಕ್ಷಗಳನ್ನು ಅವರಿಂದ ವಸೂಲು ಮಾಡುವುದರೊಂದಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 8(viii)ರ ಅಡಿಯಲ್ಲಿ ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ನೀಡುವಂತೆ ಮೇಲೆ (8)ರಲ್ಲಿ ಓದಲಾದ ಪತ್ರದಲ್ಲಿ ಕೋರಲಾಗಿತ್ತು.

ಕರ್ನಾಟಕ ಲೋಕ ಸೇವಾ ಆಯೋಗವು ಸರ್ಕಾರದ ಪ್ರಸ್ತಾವನೆಗೆ ಮೇಲೆ (9)ರಲ್ಲಿ ಓದಲಾದ ಪತ್ರದಲ್ಲಿ ಕೆಳಕಂಡಂತೆ ಸಹಮತಿಯನ್ನು ನೀಡಿದೆ:

> "ಡಾ: ಎನ್. ಬಾಲನಾಗಮ್ಮ, ಆಡಳಿತ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ. 1.50/– ಲಕ್ಷಗಳನ್ನು ಶೇಕಡ 8ರಂತೆ ಬಡ್ಡಿ ಸಮೇತ ವಸೂಲಿ ಮಾಡುವ ಷರತ್ತಿಗೊಳಪಟ್ಟಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಆಯೋಗವು ಸಹಮತಿಸಿದೆ ಎಂದು ತಿಳಿಸಲು ನಿರ್ದೇಶಿತನಾಗಿದ್ದೇನೆ."

ಸರ್ಕಾರವು ವಿಚಾರಣಾಧಿಕಾರಿಯವರ ವಿಚಾರಣಾ ವರದಿ, ಆರೋಪಿತ ಅಧಿಕಾರಿಯವರ ರಕ್ಷಣಾ ಹೇಳಿಕೆ, ದಾಖಲಾತಿಗಳು, ಸಾಕ್ಷಿಗಳು ಹಾಗೂ ಆಯುಕ್ತರ ಶಿಫಾರಸ್ಸನ್ನು ಪರಿಶೀಲಿಸಿದ ನಂತರ, ಡಾ: ಎನ್. ಬಾಲನಾಗಮ್ಮರವರು ಸರ್ಕಾರಕ್ಕೆ ಸಲ್ಲಿಸಿದ ಸೇವಾವಧಿಯನ್ನು ಗಣನೆಗೆ ತೆಗೆದುಕೊಂಡು ತೆಗೆದುಕೊಂಡು, ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಪುನರ್ ಪರಿಶೀಲಿಸಿ, ಸದರಿ ಆರೋಪಿತ ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ–8(vi)ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ಹಾಗೂ ಸದರಿಯವರಿಂದ ಸರ್ಕಾರಕ್ಕೆ ನಷ್ಟ ಉಂಟಾಗಿರುವ ರೂ. 1.50ಗಳನ್ನು ಶೇಕಡ 8% ಬಡ್ಡಿಯೊಂದಿಗೆ ವಸೂಲಿ ಮಾಡಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 50 ಎಂಎಸ್‌ಎ 2004, ಬೆಂಗಳೂರು, ದಿನಾಂಕ: 7ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ–8(vi)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಎನ್. ಬಾಲನಾಗಮ್ಮ, ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಿದೆ ಹಾಗೂ

ಸದರಿಯವರಿಂದ ಸರ್ಕಾರಕ್ಕೆ ಉಂಟಾದ ನಷ್ಟ ರೂ. 1.50 (ಒಂದು ಲಕ್ಷದ ಐವತ್ತು ಸಾವಿರ ಮಾತ್ರ)ಗಳನ್ನು ಶೇಕಡ 8% ಬಡ್ಡಿ ದರದಲ್ಲಿ ಅವರ ನಿವೃತ್ತಿ ಉಪದಾನದಿಂದ ಒಂದೇ ಕಂತಿನಲ್ಲಿ ವಸೂಲಿ ಮಾಡಲು ಸಹ ಆದೇಶಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 133

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## HEALTH AND FAMILY WELFARE SECRETARIAT

**Sub :** Audit of working accounts (Disposition Fund) of Secondary Level Health Care Facilities in Gulbarga Division of KfW Project Phase-II –reg.

**Read :** 1. Govt. Order No. HFW (PR) 309 WBA 2001, dt: 4-6-2007.

2. Notification No. DCA 7 ARB 2007.

**Preamble:**

In the Government Order read above sanction was granted to M/s V.R. Murali & Co., to conduct the audit of working accounts (Disposition Fund) of Secondary Healthcare Facilities of KfW Project Phase-I for the period between October 2005 March 2006 at Rs. 20,000/- per quarter (exclusive of service tax). This was done keeping in mind the extension of KfW Phase-I.

The KfW Phase-I Project has become operational since 2004. Accordingly, it is necessary to appoint an auditor to audit the working accounts (Disposition Fund). An Expression of Interest was invited to select suitable firms to conduct this audit as per KfW approved format. The process of short listing of the proposals received may require some time. Hence it is proposed to continue the services of Phase-I auditor i.r. M/s V.R. Murali & Co., on the same Terms and Conditions for a period of one year.

**Govt. Order No. KHW/KHSDRP/Sect/KfW-1/ 2008, Bangalore, Dated 4th February 2008**

Government are pleased to hire the services of M/s. V.R. Murali & Co., for conducting audit of working accounts (Disposition Fund) of Secondary Level Healthcare Facilities i.e. Kfw Project Phase-II, at Rs. 20,000/- (Rupees twenty thousand) only per quarter exclusive of service tax at the existing terms and conditions. The contract shall be for a period of one year or the date of signing of agreement between short listed firm as indicated in the preamble, whichever is earlier.

Further, the Consultants are eligible for travel cost as per actuals from Bangalore to the Project areas and back and per diem charge of Rs. 750/- (Rupees seven hundred fifty) only for out station visits undertaken.

The expenditure in this behalf shall be debited to the Disposition Fund of KfW Project.

By order and in the name of the President of India,

PR. 299

**SUSHAMA GODBOLE**

Deputy Secretary to Government,

KHSDRP

Department of Health and Family Welfare

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕದಿಂದ 2007–08ನೇ ಸಾಲಿನಲ್ಲಿ ಕೈಲಾಸ ಮಾನಸ ಸರೋವರ ಯಾತ್ರೆ ಕೈಗೊಂಡ ಯಾತ್ರಿಕರಿಗೆ ಧನಸಹಾಯ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 01 ಮುಅಬಿ 2006, ದಿ: 3–6–2006.

2. ಸರ್ಕಾರಿ ಆದೇಶ ಸಂಖ್ಯೆ: ಕಂಇ 139 ಮುಅಬಿ 2007, ದಿ: 8–8–2007.

3. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 13 ಸಿಆರ್ 32, 2007–08.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶದಲ್ಲಿ ಕೈಲಾಸ ಮಾನಸ ಸರೋವರ ಯಾತ್ರೆ ಕೈಗೊಂಡಿರುವ ಯಾತ್ರಿಕರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ ಮಾರ್ಗಸೂಚಿ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಸರ್ಕಾರಿ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಕೈಲಾಸ ಮಾನಸ ಸರೋವರ ಯಾತ್ರಾರ್ಥಿಗಳಿಗೆ ಧನ ಸಹಾಯ ನೀಡುವ ಕುರಿತು ಲೆಕ್ಕಶೀರ್ಷಿಕೆ 2250–00–800–2–14(100) ಯೋಜನೆಯಡಿ

ರೂ. 58.33 ಲಕ್ಷಗಳನ್ನು ಮತ್ತು ಯೋಜನೇತರಡಿ ರೂ. 8.66 ಲಕ್ಷಗಳನ್ನು ಒಟ್ಟು ರೂ. 66.99 ಲಕ್ಷಗಳನ್ನು ಬಿಡುಗಡೆ ಮಾಡಲು ಮಂಜೂರು ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಧಾರ್ಮಿಕ ದತ್ತಿ ಆಯುಕ್ತರ ಪತ್ರದಲ್ಲಿ ಕೈಲಾಸ ಮಾನಸ ಸರೋವರ ಯಾತ್ರೆ ಕೈಗೊಂಡಂತಹ ಯಾತ್ರಾರ್ಥಿಗಳಿಗೆ ಸರ್ಕಾರದಿಂದ ಮಂಜೂರಾದ ಅನುದಾನವನ್ನು ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ ಎಂದು ಇದಲ್ಲದೆ ಈ ಸೌಲಭ್ಯ ಪಡೆಯಲು ಇನ್ನು ಹೆಚ್ಚಿನ ಯಾತ್ರಿಕರಿಂದ ಧನಸಹಾಯ ಮಂಜೂರಾತಿಗಾಗಿ ಅರ್ಜಿಗಳು ಸ್ವೀಕೃತವಾಗುತ್ತಿದ್ದು, ಅರ್ಹ ಫಲಾನುಭವಿಗಳಿಗೆ ಧನಸಹಾಯ ನೀಡಲು ಈ ಯೋಜನೆಯಡಿ ಆಯವ್ಯಯದಲ್ಲಿ ಒದಗಿಸಿದ ಉಳಿಕೆ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿಕೆ ಸಲ್ಲಿಸಿರುತ್ತಾರೆ.

ಅದರಂತೆ ಕೈಲಾಸ ಮಾನಸ ಸರೋವರ ಯಾತ್ರಾರ್ಥಿಗಳಿಗೆ ಧನಸಹಾಯ ನೀಡಲು ಅನುದಾನ ಬಿಡುಗಡೆ ಮಾಡಲು, ಸರ್ಕಾರವು ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 139 ಮುಅಬಿ 2007, ಬೆಂಗಳೂರು, ದಿನಾಂಕ: 5ನೇ ಜನವರಿ 2008.**

2007-08ನೇ ಸಾಲಿನಲ್ಲಿ ಕೈಲಾಸ ಮಾನಸ ಸರೋವರ ಧನ ಸಹಾಯ ಲೆಕ್ಕ ಶೀರ್ಷಿಕೆ 2250-00-800-2-14 (100) ಯೋಜನೆಯಡಿ ರೂ. 116.67 ಲಕ್ಷಗಳನ್ನು ಮತ್ತು ಯೋಜನೇತರ ರೂ. 17.34 ಲಕ್ಷಗಳನ್ನು ಒಟ್ಟು ರೂ. 134.01 ಲಕ್ಷಗಳನ್ನು ಧಾರ್ಮಿಕ ದತ್ತಿ ಆಯುಕ್ತರು, ಬೆಂಗಳೂರುರವರಿಗೆ ಯೋಜನೆಯ ಅನುಷ್ಠಾನಕ್ಕಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಧಾರ್ಮಿಕ ದತ್ತಿ ಆಯುಕ್ತರು ಅನುದಾನದ ಬಿಲ್ಲಿನಲ್ಲಿ ಸಹಿ ಮಾಡುವುದರ ಜೊತೆಗೆ ಮೇಲು ಸಹಿ ಮಾಡಿ ಸದರಿ ಮೊತ್ತವನ್ನು ಖಜಾನೆಯಿಂದ ಪಡೆದು, ಸಂಬಂಧಪಟ್ಟ ಅರ್ಹ ಯಾತ್ರಾರ್ಥಿಗಳಿಗೆ ವಿತರಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಆ.ಟಿ. ಸಂಖ್ಯೆ: ಎಫ್‌ಡಿ 1358 ವೆಚ್ಚ-7/ 2007 ದಿನಾಂಕ 22-12-2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.135

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

**ವಿಷಯ :** ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿಯಲ್ಲಿ ಪ್ರವಾಹ ಪರಿಹಾರ ಕೈಗೊಳ್ಳಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಇವರ ಪತ್ರ ಸಂಖ್ಯೆ. ಕಂ.ನೈವಿಪ. 462/2006-07, ದಿನಾಂಕ 26-12-2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರು 2005ನೇ ಸಾಲಿನಲ್ಲಿ ಬಾರಿ ಪ್ರವಾಹ/ ಬಾರಿ ಮಳೆಯಿಂದ ಹಾನಿಗೀಡಾದ ಕಾಮಗಾರಿಗಳಿಗೆ ದುರಸ್ತಿ ಪರಿಹಾರ ಕಾರ್ಯ ಕೈಗೊಂಡಿರುವುದಕ್ಕೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 31.94 ಲಕ್ಷ ಬಿಡುಗಡೆ ಮಾಡಲು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 06 ಟಿಎನ್‌ಆರ್ 2008 ಬೆಂಗಳೂರು, ದಿನಾಂಕ: 8ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯಲ್ಲಿ 2005ನೇ ಸಾಲಿನಲ್ಲಿ ಭಾರಿ ಪ್ರವಾಹ/ ಭಾರಿ ಮಳೆಯಿಂದ ಹಾನಿಗೀಡಾದ ಕಾಮಗಾರಿಗಳಿಗೆ ದುರಸ್ತಿ ಪರಿಹಾರ ಕಾರ್ಯ ಕೈಗೊಂಡಿರುವುದಕ್ಕೆ ಜಿಲ್ಲಾಧಿಕಾರಿ, ಗುಲ್ಬರ್ಗಾ ಇವರಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 31.94 ಲಕ್ಷ (ಮೂವತ್ತೊಂದು ಲಕ್ಷದ ತೊಂಭತ್ತನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಯಮಾನುಸಾರ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಜಿಲ್ಲಾಧಿಕಾರಿಗಳು, ಪೇಯೀಸ್ ರಶೀದಿ ಬಿಲ್ಲುಗಳನ್ನು ತಯಾರಿಸಿ, ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ, ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಈ ವೆಚ್ಚವನ್ನು 2007-08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245-02-110-0-01-100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿದ ಮಾರ್ಗಸೂಚಿ/ ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1337 ವೆಚ್ಚ–7/2007 ದಿನಾಂಕ: 26–11–2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.136

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

**ಸಹಕಾರ ಸಚಿವಾಲಯ**

**ವಿಷಯ :** ಪಟ್ಟಣ ಸಹಕಾರ ಬ್ಯಾಂಕುಗಳ ದಾವಾ ಪ್ರಕರಣಗಳಲ್ಲಿ ಪಾವತಿಸುವ ಸಾದಿಲ್ವಾರು ವೆಚ್ಚವನ್ನು ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇದಕ್ಕೆ ಪಾವತಿಸುವ ಬಗ್ಗೆ.

**ಓದಲಾಗಿದೆ:**
1. ಸಹಕಾರ ಸಂಘಗಳ ನಿಬಂಧಕರ ಅಧಿಸೂಚನೆ ಸಂಖ್ಯೆ: ಆರ್‌ಸಿಎಸ್. ಡಿಎಂಸಿ. ಡಿ.8/ 04/2003–04, ದಿನಾಂಕ 3–5–2003.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ–6/499/ ಅದಾಲತ್/ 2003–04, ದಿನಾಂಕ 30–11–2007.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳದಲ್ಲಿ ವ್ಯಾಜ್ಯಗಳ ಶೀಘ್ರ ವಿಲೇವಾರಿಗಾಗಿ ರಚಿಸಲಾಗಿರುವ ಬೆಂಗಳೂರು ಮತ್ತು ಹುಬ್ಬಳ್ಳಿ ನ್ಯಾಯಾಲಯಗಳ ಸಂಬಂಧದಲ್ಲಿ ದಾವಾ ಫೀ ಅನ್ನು ಹಂಚಿಕೆ ಮಾಡುವ ಬಗ್ಗೆ ಈಗಾಗಲೇ ಸರ್ಕಾರದ ಆದೇಶ ಹೊರಡಿಸಿದೆ. ಸಾದಿಲ್ವಾರು ವೆಚ್ಚಕ್ಕಾಗಿ ಪ್ರತಿ ದಾವಾ ಪ್ರಕರಣದಲ್ಲಿ ರೂ. 120.00 ಮತ್ತು ಒಬ್ಬರಿಗಿಂತ ಹೆಚ್ಚಿನ ಪ್ರತಿಯೊಬ್ಬ ಎದುರುದಾರರಿಗೆ ರೂ. 25.00ರಂತೆ ಗೌರವ ಮಧ್ಯಸ್ಥಗಾರರಿಗೆ ಪಾವತಿಸತಕ್ಕದೆಂದು ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ತಿಳಿಸಲಾಗಿದೆ. ಪಟ್ಟಣ ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದ ದಾವೆಗಳನ್ನು ನಿಯಮ 441ರಡಿಯಲ್ಲಿ ನಿಯೋಜಿತ ಅಧಿಕಾರಿಗಳು ಇತ್ಯರ್ಥಗೊಳಿಸುತ್ತಿದ್ದು, ಬೆಂಗಳೂರು ಮತ್ತು ಹುಬ್ಬಳ್ಳಿ ಈ ಎರಡೂ ನ್ಯಾಯಾಲಯಗಳ ಸಂಪೂರ್ಣ ವೆಚ್ಚವನ್ನು ಮತ್ತು ದಾವೆಗಳಿಗೆ ತಗಲುವ ಸಾದಿಲ್ವಾರು ವೆಚ್ಚ ಅಂದರೆ ನೋಂದಣಿ, ಸ್ವೀಕೃತಿ ಮತ್ತು ಅಂಚೆ ವೆಚ್ಚವನ್ನು ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳವೇ ಭರಿಸುತ್ತಿರುವುದರಿಂದ, ಮಹಾಮಂಡಳಕ್ಕೆ ಹೊಂದಿಕೊಂಡಂತೆ ನಿಯೋಜಿತ ಅಧಿಕಾರಿಗಳು ಇತ್ಯರ್ಥಪಡಿಸುವ ದಾವಾ ಪ್ರಕರಣಗಳಲ್ಲಿ ಸಂಗ್ರಹವಾಗುವ ಸಾದಿಲ್ವಾರು ಮೊತ್ತವು ಮಹಾಮಂಡಳಕ್ಕೆ ಸೇರಬೇಕಾಗಿರುತ್ತದೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ತಿಳಿಸಿರುತ್ತಾರೆ.

ನಿಬಂಧಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 234 ಸಿಎಲ್‌ಎಂ 2007, ಬೆಂಗಳೂರು, ದಿನಾಂಕ: 28ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪಟ್ಟಣ ಸಹಕಾರ ಬ್ಯಾಂಕುಗಳ ದಾವಾ ಇತ್ಯರ್ಥಕ್ಕಾಗಿ ನಿಯೋಜಿತ ಬೆಂಗಳೂರು ಮತ್ತು ಹುಬ್ಬಳ್ಳಿ ಕೇಂದ್ರ ಸ್ಥಳವಾಗುಳ್ಳ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ಇವರ ಮುಂದೆ ದಾಖಲಿಸುವ ಪ್ರತಿ ದಾವಾ ಪ್ರಕರಣದಲ್ಲಿ ಸಾದಿಲ್ವಾರು ವೆಚ್ಚಕ್ಕಾಗಿ ರೂ. 120.00 ಮತ್ತು ಒಬ್ಬರಿಗಿಂತ ಹೆಚ್ಚಿನ ಪ್ರತಿಯೊಬ್ಬ ಎದುರುದಾರರಿಗೆ ರೂ. 25.00ರಂತೆ ಸಂಗ್ರಹವಾಗುವ ಮೊತ್ತವನ್ನು ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇದಕ್ಕೆ ಪಾವತಿಸುವಂತೆಯೂ ಮತ್ತು ಸಾದಿಲ್ವಾರು ವೆಚ್ಚಗಳನ್ನು ಪಟ್ಟಣ ಸಹಕಾರ ಬ್ಯಾಂಕುಗಳ ವತಿಯಿಂದ ಭರಿಸತಕ್ಕದ್ದಲ್ಲವೆಂದೂ ಒಂದು ವೇಳೆ ಸದರಿ ಸಾದಿಲ್ವಾರು ವೆಚ್ಚಗಳನ್ನು ಪಟ್ಟಣ ಸಹಕಾರ ಬ್ಯಾಂಕುಗಳ ವತಿಯಿಂದಲೇ ಭರಿಸುತ್ತಿದ್ದಲ್ಲಿ ಪ್ರಸ್ತಾಪಿತ ಮೊತ್ತವನ್ನು ಕರ್ನಾಟಕ ರಾಜ್ಯ ಪಟ್ಟಣ ಸಹಕಾರ ಬ್ಯಾಂಕುಗಳ ಮಹಾಮಂಡಳಕ್ಕೆ ಪಾವತಿಸತಕ್ಕದ್ದಲ್ಲವೆಂದೂ ಸರ್ಕಾರವು ಆದೇಶಿಸುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 251

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಬಿ.ವಿ. ರಮೇಶ್, ಸರ್ಕಾರದ ಅಧೀನ ಕಾರ್ಯದರ್ಶಿ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ-46/ಸಿಆರ್-4/2007/ಚಾಮರಾಜನಗರ, ದಿನಾಂಕ 30-11-2007.

**ಪ್ರಸ್ತಾವನೆ :**

ಶ್ರೀ ಬಿ.ವಿ. ರಮೇಶ್, ಸರ್ಕಾರದ ಅಧೀನ ಕಾರ್ಯದರ್ಶಿ ಅವರು ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ ಯಳಂದೂರು ತಾಲ್ಲೂಕು, ಚಾಮರಾಜನಗರ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ದಿ: 28-11-2007ರಂದು ಶ್ರೀ ಶಿವಮೂರ್ತಿ ಬಿನ್ ಲಿಂಗಯ್ಯ, ಮದ್ದೂರು ಗ್ರಾಮ, ಯಳಂದೂರು ತಾಲ್ಲೂಕು ರವರಿಂದ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದ ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಸಾಲ ಮಂಜೂರು ಮಾಡಲು ಫಲಾನುಭವಿಗಳಿಂದ ರೂ. 4,500/- ಲಂಚದ ಹಣವನ್ನು ಒತ್ತಾಯದಿಂದ ಸ್ವೀಕರಿಸುವಾಗ, ಚಾಮರಾಜನಗರ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದಿದ್ದು, ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರಡಿಯಲ್ಲಿ ಚಾಮರಾಜನಗರ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 4/2007 ಅನ್ನು ದಾಖಲು ಮಾಡಲಾಗಿದೆಯೆಂದು ಮತ್ತು ತನಿಖೆಯ ಸಲುವಾಗಿ ಅವರನ್ನು ದಸ್ತಗಿರಿ ಮಾಡಿರುವುದಾಗಿ ಮೇಲೆ ಓದಲಾದ ದಿನಾಂಕ 30-11-2007ರಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ವರದಿ ಸಲ್ಲಿಸಿ, ಆಪಾದಿತರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿದೆಯೆಂದು ಹಾಗೂ ಸದರಿ ಅಧಿಕಾರಿಯವರ ಮೇಲಿನ ಲಂಚ ಸ್ವೀಕೃತಿ ಆಪಾದನೆ ಬಗ್ಗೆ ಸುಗಮ ತನಿಖೆಗೆ ಅನುಕೂಲವಾಗುವ ದೃಷ್ಟಿಯಿಂದಲೂ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ, ಸದರಿ ಅಧಿಕಾರಿಯವರನ್ನು ಕೂಡಲೇ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಅವರ ಲೀನ್‌ನ್ನು ಬೇರೆ ಕಡೆಗೆ ಸ್ಥಳಾಂತರಿಸುವಂತೆ ಕೋರಿದ್ದಾರೆ.

ಸದರಿ ಪತ್ರದಲ್ಲಿನ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಬಿ.ವಿ. ರಮೇಶ್ ಇವರ ವಿರುದ್ಧ ಭ್ರಷ್ಟಾಚಾರದ ಆರೋಪ ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಸೇಇವಿ 2008, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ವಿ. ರಮೇಶ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-ಇ) (ನೇಮಕಾತಿ ನಿರೀಕ್ಷಣೆಯಲ್ಲಿ) ಇವರ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರಡಿಯಲ್ಲಿ ಚಾಮರಾಜನಗರ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ: 4/2007ರಲ್ಲಿ ದಾಖಲಾದ ಹಿನ್ನೆಲೆಯಲ್ಲಿ ಲೋಕಾಯುಕ್ತ ವಿಚಾರಣೆ ಬಾಕಿ ಇಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಈ ಮೂಲಕ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಬಿ.ವಿ. ರಮೇಶ್, ಸರ್ಕಾರದ ಅಧೀನ ಕಾರ್ಯದರ್ಶಿ ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ನೇ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಶ್ರೀ ಬಿ.ವಿ. ರಮೇಶ್‌ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.239

**ಕೆ.ಜಿ. ಅನಂತ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು-3)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಡಾ: ಪಿ.ಆರ್. ತ್ಯಾಗರಾಜ್, ಪಶುವೈದ್ಯಾಧಿಕಾರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು, ಇವರಿಗೆ ಸರ್ಕಾರಿ ಸೇವೆಯಿಂದ ಸ್ವ-ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಡಾ: ಪಿ.ಆರ್. ತ್ಯಾಗರಾಜು, ಪಶುವೈದ್ಯಾಧಿಕಾರಿ, ಇವರ ಮನವಿ ದಿನಾಂಕ 20-11-2006 ಮತ್ತು ದಿನಾಂಕ: 2-7-2007.
2. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ-2/ವಿವ-9/07-08, ದಿನಾಂಕ 5-9-2007.

3. ಸರ್ಕಾರದ ಪತ್ರ ಸಂಖ್ಯೆ: ಪಸಂಮೀ 201 ಪಸಸೇ 2007, ದಿನಾಂಕ 6-10-2007.
4. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ ಸಿಬ್ಬಂದಿ-2/ ವಿವ-09/ 07-08, ದಿನಾಂಕ 23-10-2007 ಹಾಗೂ ದಿನಾಂಕ 20-11-2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಮನವಿ ಪತ್ರದಲ್ಲಿ ಡಾ: ಪಿ.ಆರ್. ತ್ಯಾಗರಾಜು, ಪಶುವೈದ್ಯಾಧಿಕಾರಿ, ಇವರು ವೈಯಕ್ತಿಕ ಹಾಗೂ ಕೌಟುಂಬಿಕ ಸಮಸ್ಯೆಗಳ ಮೇರೆಗೆ ಸರ್ಕಾರಿ ಸೇವೆಯಿಂದ ಸ್ವ-ಇಚ್ಛಾನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಡಾ: ಪಿ.ಆರ್. ತ್ಯಾಗರಾಜು, ಪಶುವೈದ್ಯಾಧಿಕಾರಿ, ಇವರು ದಿನಾಂಕ 30-4-2007ರಿಂದ ಸರ್ಕಾರಿ ಸೇವೆಯಿಂದ ಸ್ವಯಂನಿವೃತ್ತಿ ಕೋರಿದ್ದು, ಸದರಿಯವರು ಹೆಚ್.ಡಿ.ಎಫ್.ಸಿ. ಸಂಸ್ಥೆಯಿಂದ ರೂ. 3.00 ಲಕ್ಷಗಳ ಗೃಹಸಾಲವನ್ನು ಪಡೆದಿದ್ದು, ಈಗಾಗಲೇ ರೂ. 1,50,030-00ಗಳನ್ನು ಸಂಬಳದಿಂದ ಪಾವತಿಸಿರುವುದಾಗಿ ಬಾಕಿ ಉಳಿದ ಹಣ ರೂ. 1,49,970-00 ಮತ್ತು ಬಡ್ಡಿಯನ್ನು ಸ್ವಯಂನಿವೃತ್ತಿಯ ನಂತರ ಸದರಿ ಅಧಿಕಾರಿಗಳ ಡಿ.ಸಿ.ಆರ್.ಜಿ. ಹಣದಿಂದ ಮುರಿದುಕೊಳ್ಳಲು ದೃಢೀಕರಣ ನೀಡಿರುವುದಾಗಿ ತಿಳಿಸಿರುತ್ತಾರೆ. ಸದರಿ ಅಧಿಕಾರಿಗಳು ದಿನಾಂಕ 6-10-1986ರಂದು ಸೇವೆಗೆ ಸೇರಿರುವುದಾಗಿಯೂ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಡಾ: ಪಿ.ಆರ್. ತ್ಯಾಗರಾಜು, ಪಶುವೈದ್ಯಾಧಿಕಾರಿ, ಇವರು ಸ್ವಯಂ ನಿವೃತ್ತಿ ಪಡೆಯಲು 15 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪೂರ್ಣಗೊಳಿಸಿರುವ ಬಗ್ಗೆ, ಯಾವುದಾದರೂ ಇಲಾಖಾ ವಿಚಾರಣೆ ಬಾಕಿ ಇರುವ ಬಗ್ಗೆ ಹಾಗೂ ಸದರಿ ಅಧಿಕಾರಿಗಳಿಂದ ಗೃಹಸಾಲ ಹೊರತುಪಡಿಸಿ ಬೇರೆ ಬಾಕಿ ಯಾವುದಾದರೂ ಸರ್ಕಾರಕ್ಕೆ ಪಾವತಿಸಬೇಕಾಗಿರುವ ಬಗ್ಗೆ ಮಾಹಿತಿ ಒದಗಿಸುವಂತೆ ಆಯುಕ್ತರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಇಲಾಖೆ, ಬೆಂಗಳೂರು, ಇವರು ಡಾ: ಪಿ.ಆರ್. ತ್ಯಾಗರಾಜು, ಪಶುವೈದ್ಯಾಧಿಕಾರಿ, ಇವರು ಸ್ವಯಂ ನಿವೃತ್ತಿ ಕೋರಿರುವ ದಿನಾಂಕ 30-4-2007ಕ್ಕೆ 20 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುವುದಾಗಿ ತಿಳಿಸಿರುತ್ತಾರೆ ಹಾಗೂ ಡಾ: ಪಿ.ಆರ್. ತ್ಯಾಗರಾಜು, ಪಶುವೈದ್ಯಾಧಿಕಾರಿ, ಅವರ ವಿರುದ್ಧವಾಗಿ ಯಾವುದೇ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವೆಂದೂ ಹಾಗೂ ಸದರಿ ಅಧಿಕಾರಿಗಳ ಗೃಹ ಸಾಲ ಹೊರತುಪಡಿಸಿ ಸರ್ಕಾರಕ್ಕೆ ಬರಬೇಕಾದ ಬಾಕಿ ಯಾವುದೂ ಇರುವುದಿಲ್ಲವೆಂದು ಸರ್ಕಾರಕ್ಕೆ ಮಾಹಿತಿ ಒದಗಿಸಿರುತ್ತಾರೆ.

ಡಾ: ಪಿ.ಆರ್. ತ್ಯಾಗರಾಜು, ಪಶುವೈದ್ಯಾಧಿಕಾರಿ, ಇವರು ಬಾಕಿ ಉಳಿಸಿಕೊಂಡಿರುವ ಗೃಹಸಾಲ ಬಾಕಿಯನ್ನು ಅವರ ಡಿ.ಸಿ.ಆರ್.ಜಿ. ಯಿಂದ ಮುರಿದುಕೊಂಡು ಅವರಿಗೆ ಸ್ವಯಂ ನಿವೃತ್ತಿ ನೀಡಬಹುದೇ ಎಂಬ ಬಗ್ಗೆ ಆರ್ಥಿಕ ಇಲಾಖೆಯ ಅಭಿಪ್ರಾಯ ಕೋರಲಾಗಿತ್ತು. ಅದಕ್ಕೆ ಆರ್ಥಿಕ ಇಲಾಖೆಯು ಬಾಕಿ ಉಳಿಸಿಕೊಂಡಿರುವ ಹೆಚ್.ಡಿ.ಎಫ್.ಸಿ. ಮುಂಗಡದ ಅಸಲು, ಬಡ್ಡಿ ಮತ್ತು Pre-payment Chargeನ ಮೊತ್ತವನ್ನು ಕೆ.ಸಿ.ಎಸ್.ಆರ್. ನಿಯಮ 215-ಎ ಅನುಸಾರ ಸದರಿ ಮುಂಗಡದಾರರ ಡಿಸಿಆರ್‌ಜಿಯಿಂದ ಲೆಕ್ಕಶೀರ್ಷಿಕೆ 8443-00-106-23ಗೆ ಖಜಾನೆಯಿಂದ ಮರುಹೊಂದಾಣಿಕೆ ಮೂಲಕ ಜಮಾ ಮಾಡುವಂತೆ ತಿಳಿಸಿದೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 201 ಪಸಸೇ 2007, ಬೆಂಗಳೂರು, ದಿನಾಂಕ: 30ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಡಾ: ಪಿ.ಆರ್. ತ್ಯಾಗರಾಜ್, ಪಶುವೈದ್ಯಾಧಿಕಾರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು, ಇವರು ಬಾಕಿ ಉಳಿಸಿಕೊಂಡಿರುವ ಹೆಚ್.ಡಿ.ಎಫ್.ಸಿ. ಮುಂಗಡದ ಅಸಲು, ಬಡ್ಡಿ ಮತ್ತು Pre-payment Chargeನ ಮೊತ್ತವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 215-ಎ ಅನುಸಾರ ಸದರಿ ಮುಂಗಡದಾರರ ಡಿಸಿಆರ್‌ಜಿಯಿಂದ ಲೆಕ್ಕಶೀರ್ಷಿಕೆ 8443-00-106-23ಗೆ ಖಜಾನೆಯಲ್ಲಿ ಮರುಹೊಂದಾಣಿಕೆ ಮೂಲಕ ಜಮಾ ಮಾಡುವ ಷರತ್ತಿಗೊಳಪಟ್ಟು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 285(1)(ಎ)ರನ್ವಯ ದಿನಾಂಕ: 31-1-2008ರ ಅಪರಾಹ್ನದಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ಸ್ವ-ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿ ಅದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 611 ವೆಚ್ಚ.4/07, ದಿನಾಂಕ 17-1-2008ರಲ್ಲಿ ನೀಡಿರುವ ಅಭಿಪ್ರಾಯದಂತೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.247

ಎಂ.ಪಿ. ನಾಗರಾಜ

ಪೀಠಾಧಿಕಾರಿ-2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ-ಎ)

**HEALTH AND FAMILY WELFARE SECRETARIAT**

**Sub :** Creation of System Manager Post in the HMIS Section of Karnataka Health System Development and Reform Project –reg.

**Read :** 1. Govt. Order No. HFW/KHSDRP/Sect/1/2006, Bangalore dt: 30-12-2006.
2. Govt. Order No. DPAR 79 SRD 97, dt: 10-8-1999.
3. Notification No. DCA 7 ARB 2007.

**Preamble:**

The organization set up of the World Bank assisted Karnataka Health System Development and Reform Project has been approved vide Govt Order read at (1) above. Various posts have been created keeping in mind the different companents and sub-components of the project and the project implementation at district level. The Monitoring and Evaluation and Information System is an important component that requires effective data management, its analysis so also implementation of IT plan during the project period. The information system includes generating the data for grading hospitals, their analysis and compilation. Hence, 6 posts of Typist were created in this wing. It is however, absolutely essential to have a System Manager who can supervise all activities of the HMIS and at the same time rectify minor problems in the hardware procured for the purpose, networking, maintenance software installation and perform essential technical jobs as per the requirement. It is hence proposed to convert 1 post of Typist to that of a System Manager.

In the Government Order read at (2) above, Government have made the Karnataka General Services (Government Computer Centre) Rules, 1997 in which the pay scale for the post of System Manager is fixed at Rs. 10.620-14,960. As per the revised pay scale this is equivalent to Rs. 20025-28,275.

Hence the following order.

**Order No. HFW/KHSDRP/Sect-61/2007, Bangalore, Dated 31st December 2007**

Under the circumstances mentioned in the preamble, Government are pleased to convert a post of Typist in the Project Office to that of a System Manager with immediate effect in the pay scale of Rs. 10,620-14-960. The post will be filled up through a menpower agency after specifying suitable qualifications for the post.

Accordingly, the relevant portion of the Annexure-I of Government Order read at (1) above shall be read and always deemed to have been read as under.

| Sl. No. | Designation of the Post | Pay Scale (in Rs.) | Govt. Posts | From Agency | Total No. of Posts | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| **KHSDRP OFFICE** | | | | | | |
| 1 | Project Administrator & ex-Officio Spl. Secy to Govt. | 18400-22400 | 1 | 0 | 1 | |
| 2 | Dy Project Administrator | 12800-14720 | 2 | 0 | 2 | Additional Director of Joint Director, HFW |
| 3 | Chief Admin Officer | 10620-14960 | 1 | 0 | 1 | |
| 4 | Chief Finance Officer | 10620-14960 | 1 | 0 | 1 | |
| 5 | Deputy Secretary | 10620-14960 | 1 | 0 | 1 | |
| 6 | Joint Directors | 9580-14200 | 7 | 0 | 7 | Joint Director or Deputy Director, HFW |
| 7 | Accounts Officer | 7400-13120 | 1 | 0 | 1 | |
| 8 | Section Officer | 6000-11200 | 1 | 0 | 1 | |
| 9 | Accounts Superintendent | 5575-10620 | 2 | 0 | 2 | |

| 1 | 2 | 3 | 4 | 5 | 6 | 7 |
|---|---|---|---|---|---|---|
| 10 | Office Manager/ Superintendent | 5200-9580 | 4 | 0 | 4 | |
| 11 | Senior Assistant | 5200-9580 | 1 | 0 | 1 | |
| 12 | Stenographers | 3850-7050 | 1 | 1 | 2 | |
| 13 | F.D.A. | 3850-7050 | 18 | 0 | 18 | |
| 14 | F.D.A.A. | 3850-7050 | 3 | 0 | 3 | |
| 15 | S.D.A. | 3000-5450 | 2 | 0 | 2 | |
| 16 | Typist | 3000-5450 | 0 | 24 | 24 | |
| 17 | System Manager | 10620-14960 | 0 | 1 | 1 | |
| 18 | Drivers | 3000-5450 | 1 | 13 | 14 | |
| 19 | Group 'D' | 2500-3850 | 4 | 14 | 18 | |
| 20 | Security Guards | | 0 | 6 | 6 | |
| | **Total** | | **51** | **59** | **110** | |

Since the Government in their order No. FD 17 SRP 2007, dt: 16-5-2007 have issued KCS (revised pay) Rules 2007 the pay scale of System Manager shall be read as Rs. 20,025-28,275.

By order and in the name of the President of India,

PR. 146

**SUSHAMA GODBOLE**

Deputy Secretary to Government,

KHSDRP

Department of Health and Family Welfare

**ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಬಳ್ಳಾರಿ ಕಂದಾಯ ತಾಲ್ಲೂಕಿನ ನೋಟರಿ ನೇಮಕಾತಿ ಬಗ್ಗೆ (ಶ್ರೀ ವಿಜಯಪಾಲ್ ಸಿಂಗ್‌ರವರ ನಿಧನದಿಂದ ತೆರವು).

**ಓದಲಾಗಿದೆ:** 1. ಸರ್ಕಾರಿ ಪತ್ರ ಸಂಖ್ಯೆ: ಲಾ 127 ಎಲ್‌ಸಿಎಲ್ 2007, ದಿನಾಂಕ 18–9–2007.

2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರ ಪತ್ರ ದಿನಾಂಕ 12–11–2007.

**ಪ್ರಸ್ತಾವನೆ :**

ಬಳ್ಳಾರಿ ಕಂದಾಯ ತಾಲ್ಲೂಕಿನಲ್ಲಿ ನೋಟಿಯಾಗಿದ್ದ ಶ್ರೀ ವಿಜಯಪಾಲ್ ಸಿಂಗ್‌ರವರು ದಿನಾಂಕ 21–5–07ರಂದು ನಿಧನರಾಗಿರುವುದಾಗಿ ತಿಳಿಸಿದ ಹಿನ್ನೆಲೆಯಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ನಿಯಮಾನುಸಾರ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ 18–9–2007ರ ಸರ್ಕಾರಿ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರನ್ನು ಕೋರಲಾಗಿತ್ತು.

ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 12–11–2007ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರು 7 ಮನವಿಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 127 ಎಲ್‌ಸಿಎಲ್ 2007, ಬೆಂಗಳೂರು, ದಿನಾಂಕ: 21ನೇ ಜನವರಿ 2008.**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀಮತಿ ಬಿ. ಇಂದಿರಾ ಸಿಂಗ್ ಬಿನ್ ಲೇಟ್ ಬಿ. ವಿಜಯಪಾಲ್ ಸಿಂಗ್ ವಕೀಲರು, ನಂ. 52(2)/20, ಗಡಂಗ್ ರಸ್ತೆ, ಕೌಲ್ ಬಜಾರ್, ಬಳ್ಳಾರಿ–583102 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಳ್ಳಾರಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು –01– ನ್ಯಾಯಪರಿಪಾಲನೆ–501–0– ಇತರೆ ಸ್ವೀಕೃತಿಗಳು–06 ಇತರೆ ಬಾಬುಗಳಿಗೆ (0070–01–501–0–06) ಸರ್ಕಾರಿ ಖಜಾನೆಯಲ್ಲಿ ನಿಗಧಿಪಡಿಸಲಾದ ರೂ. 1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ರಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.147

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

(ಆಡಳಿತ–2)

## FINANCE SECRETARIAT

**Sub :** Speical Allowance – Enhancement of the pay limit –Reg.

**Read :**
1. G.O. No. FD 80 SRP 79, dated: 20-5-1980
2. G.O. No. FD 32 SRP 83, dated: 21-6-1983
3. G.O. No. FD 2 SRP 88, dated: 28-7-1992
4. G.O. No. FD 17 SRP 95(i), dated: 11-7-1995.
5. G.O. No. FD 6 SRP 99, dated: 18-1-1999.
6. G.O. No. FD 34 SRP 99, dated: 22-7-1999.

**Government Order No. FD 40 SRP 2007, Bangalore, Dated 8th January 2008**

In G.O. No. FD 34 SRP 99, dated 22-7-1999 read at (6) above, Government Ordered enhancement in the ceiling on payment of pay + special allowance (special pay) fixed in G.O. No. FD 17 SRP 95(1), dated 11-7-1995 from Rs. 6,800/- to Rs. 18,720/- p.m. from 1-4-1998 and again to Rs. 20,720/- with effect from 1-2-1999 and until further orders.

Based on the recommendations of the 5th State Pay Commission, the KCS (RP) Rules, 2007 have been issued.

Government are now pleased to order that on payment of special allowance to the Government servants, their basic pay plus special allowance shall not exceed Rs. 39,900/- per month with effect from 1-4-2006 and until further orders.

By order and in the name of the President of India,

PR. 149

**SUNDARA RAJA GUPTHA**

Deputy Secretary to Government,

Finance Department (Services-2)

## ಆರ್ಥಿಕ ಸಚಿವಾಲಯ

**ವಿಷಯ :** ಸಮೂಹ 'ಸಿ' ಮತ್ತು 'ಡಿ' ವರ್ಗದ ರಾಜ್ಯ ಸರ್ಕಾರಿ ನೌಕರರಿಗೆ ವೈದ್ಯಕೀಯ ವೆಚ್ಚವನ್ನು ಮರುಪಾವತಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಪಿ 96 ದಿನಾಂಕ 28–12–1996.
2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಪಿ 96 ದಿನಾಂಕ 15–5–1997.
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಪಿ 96 ದಿನಾಂಕ 11–12–1998.
4. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 38 ಎಸ್‌ಆರ್‌ಪಿ 2005, ದಿನಾಂಕ 16–7–2005.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 28–12–1996ರ ಸರ್ಕಾರಿ ಆದೇಶದಲ್ಲಿ, ಸಮೂಹ 'ಸಿ' ಮತ್ತು 'ಡಿ' ವರ್ಗದ ರಾಜ್ಯ ಸರ್ಕಾರಿ ನೌಕರರಿಗೆ ದಿನಾಂಕ 1–1–1997ರಿಂದ ಜಾರಿಗೆ ಬರುವಂತೆ ಮಾಹೆಯಾನ ರೂ. 25–00ರಂತೆ ವೈದ್ಯಕೀಯ ಭತ್ಯೆಯನ್ನು ಈ ಕೆಳಗೆ ಸೂಚಿಸಿರುವ ಪ್ರಕರಣಗಳಲ್ಲಿ ಮಾತ್ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಾವಳಿ 1963ರ ಅನ್ವಯ ವೈದ್ಯಕೀಯ ವೆಚ್ಚದ ಮರುಪಾವತಿಗೆ ಅರ್ಹರಿರುತ್ತಾರೆ ಎಂಬ ಷರತ್ತಿಗೆ ಒಳಪಟ್ಟು ಮಂಜೂರು ಮಾಡಲು ಆದೇಶಿಸಲಾಗಿದೆ.

(ಅ) ಸರ್ಕಾರಿ ಆಸ್ಪತ್ರೆಗಳಲ್ಲಿ ಒಳ ರೋಗಿಯಾಗಿ ಪಡೆದ ಚಿಕಿತ್ಸೆಗೆ ತಗಲುವ ವೈದ್ಯಕೀಯ ವೆಚ್ಚಗಳು.

(ಆ) ಟಿ.ಬಿ., ಮಧುಮೇಹ, ಹೃದಯದ ತೊಂದರೆಗಳು, ರಕ್ತದೊತ್ತಡ, ಕ್ಯಾನ್ಸರ್ ಇತ್ಯಾದಿ ದೀರ್ಘಕಾಲಿಕ ರೋಗಗಳಿಗಾಗಿ ಅಧಿಕೃತ ವೈದ್ಯರ ಸಲಹೆ ಮೇರೆಗೆ ಮನೆಯಲ್ಲಿಯೇ ಪಡೆಯುವ ಚಿಕಿತ್ಸೆಗೆ ಖರೀದಿಸಲಾದ ಔಷಧಿಗಳ ವೆಚ್ಚ.

ಮೇಲೆ (2)ರಲ್ಲಿ ಓದಲಾದ ದಿನಾಂಕ 15-5-1997ರ ಸರ್ಕಾರಿ ಆದೇಶದಲ್ಲಿ, ಸಮೂಹ 'ಸಿ' ಮತ್ತು 'ಡಿ' ವರ್ಗದ ನೌಕರರಿಗೆ ಕನ್ನಡಕ, ಶ್ರವಣಸಾಧನ, ಕೃತಕ ಕಾಲು ಇತ್ಯಾದಿಗಳಿಗೆ ಸಂಬಂಧಿಸಿದ ವೆಚ್ಚಗಳನ್ನು ಸಹ ಮರುಪಾವತಿಸಲು ಅವಕಾಶ ಕಲ್ಪಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 11-12-1998ರ ಸರ್ಕಾರಿ ಆದೇಶದಲ್ಲಿ, ಉಲ್ಲೇಖ (1)ರ ಸರ್ಕಾರಿ ಆದೇಶದ ಕಂಡಿಕೆ (1)ಬಿ ಯ ಮುಂದುವರಿಕೆಯಾಗಿ ದೀರ್ಘಕಾಲಿಕ ರೋಗಗಳು ಯಾವುವು ಎನ್ನುವುದರ ಬಗ್ಗೆ ಸ್ಪಷ್ಟೀಕರಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ 16-7-2005ರ ಸರ್ಕಾರಿ ಆದೇಶದಲ್ಲಿ, ರಾಜ್ಯ ಸರ್ಕಾರಿ ನೌಕರರು ಸೌಂದರ್ಯವರ್ಧಕವಲ್ಲದ ಅಥವಾ ಕಾಂತಿವರ್ಧಕವಲ್ಲದ ದಂತ ಚಿಕಿತ್ಸೆ (Non-Cosmetic dental treatment)ಯನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ/ ಸರ್ಕಾರವು ಮಾನ್ಯತೆ ನೀಡಿರುವ ಖಾಸಗಿ ಆಸ್ಪತ್ರೆ ಹಾಗೂ ಪ್ರಯೋಗ ಶಾಲೆಗಳಲ್ಲಿ ಹೊರರೋಗಿಯಾಗಿ ಪಡೆದ ಸಂದರ್ಭಗಳಲ್ಲಿ ಅರ್ಹ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಅವಕಾಶ ಕಲ್ಪಿಸಿದೆ.

ಸರ್ಕಾರಿ ಆಸ್ಪತ್ರೆಗಳಲ್ಲಿ/ ಮಾನ್ಯತೆ ಪಡೆದ ಖಾಸಗಿ ಆಸ್ಪತ್ರೆಗಳಲ್ಲಿ ಹೊರ ರೋಗಿಯಾಗಿ ಪಡೆದ Ostero Arithirits ಖಾಯಿಲೆಯ ಚಿಕಿತ್ಸೆಯ ವೆಚ್ಚವನ್ನು ಮರುಪಾವತಿಸುವ ಸಲುವಾಗಿ Ostero Arithirits ಖಾಯಿಲೆಯನ್ನು ದೀರ್ಘಾವಧಿ ಖಾಯಿಲೆಯೆಂದು ಪರಿಗಣಿಸುವಂತೆ ಕೆಲವು ಸರ್ಕಾರಿ ನೌಕರರು ಸರ್ಕಾರಕ್ಕೆ ಕೋರಿಕೆಯನ್ನು ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, Ostero Arithirits ಖಾಯಿಲೆಯನ್ನು ಧೀರ್ಘಾವಧಿ ಖಾಯಿಲೆಯೆಂದು ಪರಿಗಣಿಸುವ ಕುರಿತು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಎಫ್‌ಡಿ 51 ಎಸ್‌ಆರ್‌ಪಿ 2007, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಪಿ 96 ದಿನಾಂಕ 11-12-1998ರಲ್ಲಿ ಉಲ್ಲೇಖಿಸಲಾಗಿರುವ ದೀರ್ಘಕಾಲಿಕ ರೋಗಗಳ ಪಟ್ಟಿಯಲ್ಲಿ Ostero Arithirits ಖಾಯಿಲೆಯನ್ನು ದೀರ್ಘಾವಧಿ ಕಾಯಿಲೆಯೆಂದು ಪರಿಗಣಿಸಿ ಸೇರಿಸಲಾಗಿದೆ. ಸದರಿ ಖಾಯಿಲೆಯ ಚಿಕಿತ್ಸೆಯನ್ನು ಸರ್ಕಾರಿ ಆಸ್ಪತ್ರೆಗಳಲ್ಲಿ/ ಸರ್ಕಾರವು ಮಾನ್ಯತೆ ನೀಡಿರುವ ಖಾಸಗಿ ಆಸ್ಪತ್ರೆಗಳಲ್ಲಿ ಹೊರ ರೋಗಿಯಾಗಿ ಪಡೆದ ಸಂದರ್ಭಗಳಲ್ಲಿ ಅರ್ಹ ವೈದ್ಯಕೀಯ ವೆಚ್ಚವನ್ನು ಮರು ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 150

**ಸುಂದರ ರಾಜ ಗುಪ್ತ**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-2)

**ಸಾರಿಗೆ ಸಚಿವಾಲಯ**

**ವಿಷಯ :** ದಿನಾಂಕ 1-4-2000ರಂದು ಸಾರಿಗೆ ಇಲಾಖೆಯಲ್ಲಿ ಖಾಲಿ ಇದ್ದ ಹುದ್ದೆಗಳ ಪೈಕಿ ಶೇ. 80ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸಿ.ಆ.ಸು. ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿ.ಆ.ಸು.ಇ. 02 ಈಕಾಅ 2004 ದಿನಾಂಕ 1-3-2004.
2. ಸಾರಿಗೆ ಆಯುಕ್ತರ ಪತ್ರ ಸಂಖ್ಯೆ ಸಾಆ:ಸಿಬ್ಬಂದಿ-3:ವೈವೆ-17: 2000-01, ದಿನಾಂಕ 17-8-2007.
3. ದಿನಾಂಕ 20-11-2007ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಿಯುತ ಸಮಿತಿಯ ಸಭೆಯ ನಡವಳಿಗಳು.
4. ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಸಾಅ: ಸಿಬ್ಬಂದಿ-1:ವೈವ-33/ 2003-04, ದಿನಾಂಕ 20-12-2007.

**ಪ್ರಸ್ತಾವನೆ :**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು (ಆಡಳಿತ ಸುಧಾರಣೆ, ತರಬೇತಿ, ರಾ.ವಿ.ವೇ) ಮೇಲೆ ಓದಲಾದ (1)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ದಿನಾಂಕ 27-3-2001ರಂದು ಸನ್ಮಾನ್ಯ ಮುಖ್ಯಮಂತ್ರಿಯವರು 2000-01ನೇ ಸಾಲಿನ ಆಯವ್ಯಯ ಭಾಷಣ ಮಾಡುವಾಗ ಸರ್ಕಾರ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ 80,000 ಹುದ್ದೆಗಳಲ್ಲಿ ಶೇ. 80ರಷ್ಟು ಹುದ್ದೆಗಳನ್ನು ರದ್ದುಗೊಳಿಸಲು ಪ್ರಸ್ತಾಪಿಸಿರುವುದರಿಂದ, ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಶೇ. 80ರಷ್ಟು ಹುದ್ದೆಗಳನ್ನು ರದ್ದುಗೊಳಿಸಲು ಸರ್ಕಾರಿ ಆದೇಶಗಳನ್ನು ಹೊರಡಿಸಿ, ವೃಂದ ಪುನರಾವಲೋಕನ ಸಮಿತಿ ಸಭೆ ನಡೆಸಿ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತವಾದ ಮಾರ್ಪಾಡುಗಳನ್ನು ಮಾಡುವುದರ ಮೂಲಕ ಹುದ್ದೆಗಳನ್ನು ರದ್ದುಪಡಿಸುವ ಪ್ರಕ್ರಿಯೆಯನ್ನು ಪೂರ್ಣಗೊಳಿಸಬೇಕೆಂದು ಸೂಚಿಸಿತ್ತು.

ಸಾರಿಗೆ ಆಯುಕ್ತರು, ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ದಿನಾಂಕ 1-4-2000ರಂದು ಸಾರಿಗೆ ಇಲಾಖೆಯಲ್ಲಿ ಖಾಲಿ ಇದ್ದ ಹುದ್ದೆಗಳ ವಿವರಗಳನ್ನು ನೀಡಿದ್ದರು, ಸದರಿ ಮಾಹಿತಿಯನ್ನು ದಿನಾಂಕ 20-11-2007ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿಯ ಸಭೆಯಲ್ಲಿ ಸಾರಿಗೆ ಇಲಾಖೆಯ ದ್ವಿತೀಯ

ದರ್ಜೆ ಸಹಾಯಕರ ವೃಂದದಲ್ಲಿ 40 ಹುದ್ದೆಗಳನ್ನು ರದ್ದುಮಾಡಲು ತೀರ್ಮಾನಿಸಿದ್ದು, ಅದರಲ್ಲಿ ಹಾಲಿ ಖಾಲಿ ಇರುವ 18 ಹುದ್ದೆಗಳನ್ನು ಕೂಡಲೇ ರದ್ದುಗೊಳಿಸಲು ಮತ್ತು ಉಳಿದ 22 ಹುದ್ದೆಗಳನ್ನು ದ್ವಿತೀಯ ದರ್ಜೆ ಸಹಾಯಕರಿಂದ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಬಡ್ತಿ ನೀಡಿ, ಆಗ ಖಾಲಿಯಾಗಲಿರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಲ್ಲಿ 22 ಹುದ್ದೆಗಳನ್ನು ರದ್ದುಮಾಡಲು ಸಮಿತಿಯು ತೀರ್ಮಾನಿಸಿತು. ಮತ್ತು ಗ್ರೂಪ್ ಡಿ ಹುದ್ದೆಗಳನ್ನು ಬಾಹ್ಯ ಮೂಲಗಳಿಂದ ತುಂಬಬಹುದಾಗಿದ್ದು, ಅದಕ್ಕೆ ಅಗತ್ಯವಾದ ಅನುದಾನವನ್ನು ಆರ್ಥಿಕ ಇಲಾಖೆಯು ಒದಗಿಸುವ ಷರತ್ತಿಗೊಳಪಟ್ಟು 49 ಗ್ರೂಪ್ ಡಿ ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಲಾಯಿತು.

ಸಾರಿಗೆ ಇಲಾಖೆಯು ಮೇಲೆ ಓದಲಾದ (4)ರ ಅಧಿಕೃತ ಜ್ಞಾಪನದಲ್ಲಿ ಸಾರಿಗೆ ಇಲಾಖೆಯಲ್ಲಿನ 34 ಜನ ದ್ವಿತೀಯ ದರ್ಜೆ ಸಹಾಯಕರನ್ನು ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಬಡ್ತಿ ನೀಡಿ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಿರುತ್ತದೆ. ಇದರಿಂದಾಗಿ ಸಾರಿಗೆ ಇಲಾಖೆಯಲ್ಲಿ ಖಾಲಿ ಇರುವ ಒಟ್ಟು 52 ಹುದ್ದೆಗಳಲ್ಲಿ ಮೇಲೆ ಓದಲಾದ (3)ರಲ್ಲಿನ ಸಭೆಯ ತೀರ್ಮಾನದಂತೆ 40 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ರದ್ದುಗೊಳಿಸಬಹುದಾಗಿದೆ. ಬಾಹ್ಯ ಮೂಲದಿಂದ ಗ್ರೂಪ್ ಡಿ ಹುದ್ದೆಗಳನ್ನು ತುಂಬಲು ಅಗತ್ಯವಾದ ಅನುದಾನವನ್ನು ಆರ್ಥಿಕ ಇಲಾಖೆಯು ಒದಗಿಸಿದ ನಂತರ 49 ಗ್ರೂಪ್ ಡಿ ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಾರಿಇ 2 ಸಾಇಸೇ 2008, ಬೆಂಗಳೂರು, ದಿನಾಂಕ: 11ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾರಿಗೆ ಇಲಾಖೆಯಲ್ಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಪೈಕಿ ಹಾಲಿ ಖಾಲಿ ಇರುವ ಹುದ್ದೆಗಳಲ್ಲಿ 40 ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 157

**ಎಂ.ಆರ್. ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ,

ಸಾರಿಗೆ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ಬದಲಾವಣೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಮುನೋಸೊ 2004, ದಿನಾಂಕ 26-8-2005, 28-6-2006.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಮುನೋಸೊ 2006, ದಿನಾಂಕ 31-10-2006, 2-2-2007.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಮುನೋಸೊ 2007, ದಿನಾಂಕ 3-8-2007, 18-12-2007.
4. ಆಡಳಿತಾಧಿಕಾರಿಗಳು, ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ಗಾಂಧಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿನೋ/ಗಾ.ನೋ.ಜಿ./335/2007-08, ದಿನಾಂಕ 31-12-2007.

**ಪ್ರಸ್ತಾವನೆ :**

ಮೇಲೆ ಓದಲಾದ (1) ಮತ್ತು (2)ರ ಆದೇಶಗಳಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ಕಾಲಕಾಲಕ್ಕೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದೆ.

ಮೇಲೆ ಓದಲಾದ (3)ರ ಸರ್ಕಾರದ ದಿನಾಂಕ 3-8-2007ರ ಆದೇಶದಂತೆ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯ ಆಡಳಿತಾಧಿಕಾರಿಯಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಉತ್ತರ ವಲಯ-1, ರಾಜಾಜಿನಗರ, ಬೆಂಗಳೂರು-1, ಇವರ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ 26-5-2007 ರಿಂದ 6 ತಿಂಗಳ ಅವಧಿಗೆ ವಿಸ್ತರಣೆ ಮಾಡಿದ್ದು ಹಾಗೂ ದಿನಾಂಕ 18-12-2007ರ ಸರ್ಕಾರದ ಆದೇಶದಲ್ಲಿ ಸಂಸ್ಥೆಯ ಆಡಳಿತಾಧಿಕಾರಿಯಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಉತ್ತರ ವಲಯ-1, ರಾಜಾಜಿನಗರ, ಬೆಂಗಳೂರು-1, ಇವರ ಬದಲಿಗೆ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದು, ನಂತರ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ 26-11-2007ರಿಂದ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶವನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (4)ರ ಜಿಲ್ಲಾ ನೋಂದಣಾಧಿಕಾರಿಗಳು, ಗಾಂಧಿನಗರ ನೋಂದಣಿ ಜಿಲ್ಲೆ, ಬೆಂಗಳೂರು ಇವರ ದಿನಾಂಕ 31–12–2007ರ ಪತ್ರದಲ್ಲಿ ಸದರಿ ಅಧಿಕಾರಿಗಳ ಕಾರ್ಯ ವ್ಯಾಪ್ತಿಯಲ್ಲಿ 8 ಉಪ ನೋಂದಣಿ ಕಛೇರಿಗಳು, ಸುಮಾರು 15000 ಸಂಘಗಳು ಹಾಗೂ ಸುಮಾರು 40000 ಸಂಘಗಳ ಬಗ್ಗೆ ದಿನನಿತ್ಯವು ಕಾರ್ಯಾಚರಣೆ ಬಹಳ ಜಾಸ್ತಿಯಾಗಿದ್ದು, ಕೆಲಸದ ಒತ್ತಡ ಮತ್ತು ಸದರಿ ಕಾರ್ಯದಲ್ಲಿ ವಿಚಾರಣೆಗಳು ಮತ್ತು ನ್ಯಾಯಾಲಯದ ಹಾಜರಾತಿಗಳು ಹಾಗೂ ಎಲ್ಲಾ ಕಾರ್ಯಭಾರಗಳ ಕಾರಣ ಬಹಳ ಒತ್ತಡ ಪೂರಕವಾಗಿದ್ದು ಮತ್ತು ತಮಗೆ 2002ನೇ ಇಸವಿಯಲ್ಲಿ ಹೃದಯ ಶಸ್ತ್ರಚಿಕಿತ್ಸೆ ಆಗಿದ್ದು, ಜೊತೆಗೆ ಸಕ್ಕರೆ ಕಾಯಿಲೆ ಹಾಗೂ ರಕ್ತದೊತ್ತಡ ಕಾಯಿಲೆಯಿಂದ ಬಳಲುತ್ತಿದ್ದು, ಸಿಟಿ ಫ್ಯಾಮಿಲಿ ಅಸೋಸಿಯೇಷನ್, ರಾಜಾಜಿನಗರ, ಬೆಂಗಳೂರು ಇದು ಕ್ಲಬ್ ಆಗಿದ್ದು, ಸಂಜೆ ವೇಳೆಯಲ್ಲಿ ಕಾರ್ಯಾಚರಣೆ ನಡೆಯುವ ಕಾರಣ, ನಿಷ್ಠೆಯಿಂದ ಸದರಿ ಸಂಘದ ಕೆಲಸ ಕಾರ್ಯ ನೋಡಿಕೊಳ್ಳಲು ಸಾಧ್ಯವಿಲ್ಲದೇ ಇರುವ ಪ್ರಯುಕ್ತ ತಮ್ಮನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಿರುವುದನ್ನು ರದ್ದುಪಡಿಸಿ ಬೇರೆ ಅಧಿಕಾರಿಯನ್ನು ನೇಮಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಮುನೋಸೋ 2007, ಬೆಂಗಳೂರು, ದಿನಾಂಕ: 23ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27–ಎ ಪ್ರಕಾರ ಜಿಲ್ಲಾ ನೋಂದಣಾಧಿಕಾರಿಗಳು, ಗಾಂಧಿನಗರ ನೋಂದಣಿ ಕಛೇರಿ, ಬೆಂಗಳೂರು ಇವರ ಬದಲಿಗೆ ಜಿಲ್ಲಾ ನೋಂದಣಾಧಿಕಾರಿಗಳು, ರಾಜಾಜಿನಗರ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಿದೆ. ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಮುನೋಸೊ 2007, ದಿನಾಂಕ 18–12–2007ರಲ್ಲಿ ಆಡಳಿತಾಧಿಕಾರಿಗಳ ಕಾಲಾವಧಿಯನ್ನು ಈಗಾಗಲೇ ದಿನಾಂಕ 26–11–2007ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಿರುವುದರಿಂದ, ಸದರಿ ವಿಸ್ತರಿಸಿದ ಅವಧಿಯಲ್ಲಿ ಆಡಳಿತಾಧಿಕಾರಿಗಳು ಸಂಸ್ಥೆಗೆ ಚುನಾವಣೆಯನ್ನು ನಿಯಮಾನುಸಾರ ಕಟ್ಟುನಿಟ್ಟಾಗಿ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 164

**ಶಿವಲಿಂಗ**

ಪೀಠಾಧಿಕಾರಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಶ್ರೀ ಎನ್.ಎಸ್. ಹೋಳಿಮಠ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಇವರು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿಗಳ ನಿಯಿಮ 18ರಡಿ ಸಲ್ಲಿಸಿರುವ ಮೇಲ್ಮನವಿ ಕುರಿತು –ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿ.ಪಂ. ಶಿವಮೊಗ್ಗ ಇವರ ಅ.ಸ. ಪತ್ರ ಸಂಖ್ಯೆ: ಜಿಪ: ಶೀಊಖಾ–2: ಗ್ರಾನೀಸ: ವಿ.ಬಾ.ಯೋ. ಶಿಸ್ತು ಕ್ರಮ: 2000–01, ದಿನಾಂಕ 25–2–2001.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 01 ದಿನಾಂಕ 5–2–2001.
3. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಇಎನ್‌ಕ್ಯೂ 01 ದಿನಾಂಕ 16–6–2005.
4. ಶ್ರೀ ಎನ್.ಎಸ್. ಹೋಳಿಮಠ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಇವರು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿರುವ ದಿನಾಂಕ 22–8–05ರ ಮೇಲ್ಮನವಿ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಶ್ರೀ ಎನ್.ಎಸ್. ಹೋಳಿಮಠ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಇವರು ಜಿಲ್ಲಾ ಮೇಲ್ವಿಚಾರಣಾ ಘಟಕ, ಶಿವಮೊಗ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ವಿಶ್ವಬ್ಯಾಂಕ್ ಯೋಜನೆಯಡಿಯಲ್ಲಿ ಕೈಗೊಳ್ಳಲಾದ ಸಮಗ್ರ ಗ್ರಾಮೀಣ ನೀರು ಸರಬರಾಜು ಯೋಜನೆಯ ಕಾಮಗಾರಿಗಳ ಪೈಕಿ ಕೋಣಂದೂರು ಗ್ರಾಮದ ನೀರು ಸರಬರಾಜು ಯೋಜನೆಯಲ್ಲಿ 670 ಮೀಟರ್ ಉದ್ದದ 90 ಎಂಎಂ ಅಳತೆಯ ಪೈಪ್‌ಗಳನ್ನು ಗುತ್ತಿಗೆದಾರರು ಅಳವಡಿಸದೇ ಇದ್ದರೂ ಸಹ ಪಿ.ವಿ.ಸಿ. ಪೈಪ್‌ಗಳನ್ನು ಅಳವಡಿಸಲಾಗಿದೆ ಎಂದೂ, ಗುತ್ತಿಗೆದಾರರಿಗೆ ಹಣ ಪಾವತಿಸಿರುವ ರಿಬ್ಬನ್ ಪೇಟೆ, ಶಿಗ್ಗಾಂ, ಕುರವಳ್ಳಿ, ಕೆಳದಿ, ಚಂದ್ರಗುತ್ತಿ, ಹರಮಘಟ್ಟ ಗ್ರಾಮದ ಕಾಮಗಾರಿಗಳನ್ನು ಸಮರ್ಪಕವಾಗಿ ಕರ್ತವ್ಯ ನಿರ್ವಹಿಸಿಲ್ಲವೆಂದೂ ಹಾಗೂ ಮಾನ್ಯ ಮುಖ್ಯಮಂತ್ರಿಯವರು ದಿನಾಂಕ 18–9–2000ರಂದು ಭೇಟಿ ನೀಡಿ ಈ ಯೋಜನೆಯ ಪ್ರಗತಿ ತೃಪ್ತಿಕರವಾಗಿಲ್ಲವೆಂದು ವ್ಯಕ್ತಪಡಿಸಿ, ನ್ಯೂನತೆಗಳನ್ನು ಕೂಡಲೇ ಸರಿಪಡಿಸಲು ನಿರ್ದೇಶಿಸಿದ್ದಾರೆಂದೂ, ಈ ಯೋಜನೆಯ ಉನ್ನತ ಮಟ್ಟದ ಸಮಿತಿಯು ಸ್ಥಳ ತನಿಖೆ ಮಾಡಿ, ಕಾಮಗಾರಿಯ ಲೋಪದೋಷಗಳನ್ನು ಗುರ್ತಿಸಿದೆಯೆಂದೂ ಹಾಗಾಗಿ ಈ ಅಧಿಕಾರಿಯು ಕರ್ತವ್ಯ ನಿರ್ಲಕ್ಷತೆ ತೋರಿದ್ದರ ಹಿನ್ನಲೆಯಲ್ಲಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರ

ಅಡಿಯಲ್ಲಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಪ್ರಸ್ತಾಪಿಸಿದ್ದರ ಮೇರೆಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 5–2–2001ರಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸಲಾಗಿತ್ತು.

ಅದರಂತೆ, ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ನು ಹಾಗೂ ಆರೋಪಿತ ಅಧಿಕಾರಿಯು 2ನೇ ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿದ್ದ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಮತ್ತು ಕರ್ನಾಟಕ ಲೋಕಸೇವಾ ಆಯೋಗವು ಈ ಬಗ್ಗೆ ನೀಡಿದ್ದ ಅಭಿಪ್ರಾಯವನ್ನು ಪರಿಗಣಿಸಿ, ಮೇಲೆ (3)ರಲ್ಲಿ ಓದಲಾದ ಸರ್ಕಾರದ ದಿನಾಂಕ 16–6–2005ರ ಆದೇಶದಲ್ಲಿ ಶ್ರೀ ಎನ್.ಎಸ್. ಹೊಳೀಮಠ ಅಂದಿನ ಕಾರ್ಯಪಾಲಕ ಇಂಜಿನಿಯರ್, (ಪ್ರಸ್ತುತ ನಿವೃತ್ತ), ಜಿಲ್ಲಾ ಯೋಜನಾ ಮೇಲ್ವಿಚಾರಣಾ ಘಟಕ, ಶಿವಮೊಗ್ಗ ಇವರ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ ನಿಯಮ 214ರನ್ವಯ ಇವರ ವಿರುದ್ಧ ಇಲಾಖಾ ವಿಚಾರಣೆಯಿಂದ ಸಾಬೀತಾದ ಆಪಾದನೆಗಳ ತೀವ್ರತೆಯನ್ನು ಪರಿಗಣಿಸಿ, ಇವರ ನಿವೃತ್ತಿ ವೇತನದ ಶೇಕಡ 5ರಷ್ಟನ್ನು ಪ್ರತಿ ತಿಂಗಳು ಹತ್ತು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಸದರಿ ದಂಡನೆಯನ್ನು ವಿಧಿಸಿದ ಸರ್ಕಾರದ ಕ್ರಮವನ್ನು ಪ್ರಶ್ನಿಸಿ, ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎನ್.ಎಸ್. ಹೊಳೀಮಠ ಅಂದಿನ ಕಾರ್ಯಪಾಲಕ ಇಂಜಿನಿಯರ್, ಇವರು ಘನತೆವೆತ್ತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದ್ದರು. ಸದರಿ ಮೇಲ್ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಘನತೆವೆತ್ತ ರಾಜ್ಯಪಾಲರು ಕರ್ತವ್ಯಲೋಪ, ಬೇಜವಾಬ್ದಾರಿ ಹಾಗೂ ದುರ್ನಡತೆಯ ಆರೋಪಗಳು ನಿಸ್ಸಂಶಯವಾಗಿ ರುಜುವಾತಾಗಿದ್ದು, ವಿಧಿಸಿರುವ ದಂಡನೆಯು ತೀರಾ ಚಿಕ್ಕದ್ದಾಗಿರುವುದರಿಂದ ಮೇಲ್ಮನವಿಯನ್ನು ತಿರಸ್ಕರಿಸಿ, ಶಿಸ್ತು ಪ್ರಾಧಿಕಾರವಾದ ಸರ್ಕಾರದ ಕ್ರಮವನ್ನು ಎತ್ತಿ ಹಿಡಿದು ಆದೇಶಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 12 ಇಎನ್‌ಕ್ಯೂ 07, ಬೆಂಗಳೂರು, ದಿನಾಂಕ: 16ನೇ ಜನವರಿ 2008.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಶ್ರೀ ಎನ್.ಎಸ್. ಹೊಳೀಮಠ, ಅಂದಿನ ಕಾರ್ಯಪಾಲಕ ಇಂಜಿನಿಯರ್, (ಪ್ರಸ್ತುತ ನಿವೃತ್ತ), ಜಿಲ್ಲಾ ಯೋಜನಾ ಮೇಲ್ವಿಚಾರಣಾ ಘಟಕ, ಶಿವಮೊಗ್ಗ ಇವರು ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಿ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ 214ರನ್ವಯ ಅವರ ನಿವೃತ್ತಿ ವೇತನದ ಶೇಕಡ 5ರಷ್ಟನ್ನು ಪ್ರತಿ ತಿಂಗಳು ಹತ್ತು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಿರುವುದನ್ನು ಸ್ಥಿರೀಕರಿಸಿ ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 169

**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ
(ಸೇವೆಗಳು–ಎ)

## ವಸತಿ ಸಚಿವಾಲಯ

**ವಿಷಯ :** ಕುಷ್ಠರೋಗದಿಂದ ಗುಣಹೊಂದಿದ ವ್ಯಕ್ತಿಗಳಿಗೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ನಗರ ಹಾಗೂ ಪಟ್ಟಣ ಪ್ರದೇಶಗಳಲ್ಲಿ ನರ್ಮ್/ಐಹೆಚ್‌ಎಸ್‌ಡಿಪಿ ಯೋಜನೆಯಡಿ ನಿರ್ಮಿಸುವ ಮನೆಗಳನ್ನು ಹಂಚಿಕೆ ಮಾಡಲು ವಾರ್ಷಿಕ ವರಮಾನದ ಮಿತಿಯನ್ನು ಪರಿಗಣಿಸದೆ ಮನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಯುಡಿ 197 ಪಿಹೆಚ್‌ಎಸ್ 92, ದಿನಾಂಕ 11–11–1992.
2. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಯುಡಿ 1 ಹೆಚ್‌ಎಹೆಚ್ 95(2), ದಿನಾಂಕ 18–8–1995.
3. ಫಾದರ್ ಜಾರ್ಜ್ ಕಣ್ಣತಾನಮ್ ನಿರ್ದೇಶಕರು, ಸುಮನಹಳ್ಳಿ, ಕುಷ್ಠರೋಗ ಪೀಡಿತರ ಪುನರ್ವಸತಿ ತರಬೇತಿ ಕೇಂದ್ರ, ಬೆಂಗಳೂರು ಇವರ ಮನವಿ ದಿನಾಂಕ 7–3–2007.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕುಷ್ಠರೋಗದಿಂದ ಗುಣಹೊಂದಿರುವ ವ್ಯಕ್ತಿಗಳಿಗೆ ಅವರ ಹೆಸರಿನಲ್ಲಿ ಯಾವುದೇ ಮನೆ ಅಥವಾ ನಿವೇಶನವಿಲ್ಲದಿದ್ದಲ್ಲಿ ಅವರ ಮಾಸಿಕ ವರಮಾನದ ಮಿತಿಯನ್ನು ಪರಿಗಣಿಸದೆ ಗ್ರಾಮೀಣ ಅಥವಾ ನಗರ ಆಶ್ರಯ ಯೋಜನೆಯಡಿಯಲ್ಲಿ ಮನೆ ಅಥವಾ ನಿವೇಶನಗಳನ್ನು ಮಂಜೂರು ಮಾಡಲು ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (1)ರಲ್ಲಿನ ಸರ್ಕಾರಿ ಆದೇಶದಂತೆ ನರ್ಮ್/ಐಹೆಚ್‌ಎಸ್‌ಡಿಪಿ ಯೋಜನೆಗಳಡಿ ನಿರ್ಮಿಸುವ ಮನೆಗಳ ಹಂಚಿಕೆಯಲ್ಲೂ ಕುಷ್ಠರೋಗದಿಂದ ಗುಣ ಹೊಂದಿದ ವ್ಯಕ್ತಿಗಳಿಗೆ ಮಂಜೂರು ಮಾಡುವ ಬಗ್ಗೆ ಸೂಕ್ತ ಆದೇಶ

ಹೊರಡಿಸಬೇಕೆಂದು ಮೇಲೆ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ ಫಾದರ್ ಜಾರ್ಜ್ ಕಣ್ಣಂತಾನಮ್ ನಿರ್ದೇಶಕರು, ಸುಮನಹಳ್ಳಿ, ಕುಷ್ಠರೋಗ ಪೀಡಿತರ ಪುನರ್ವಸತಿ ತರಬೇತಿ ಕೇಂದ್ರ, ಬೆಂಗಳೂರು ಇವರು ಸರ್ಕಾರಕ್ಕೆ ಮನವಿ ಮಾಡಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 23 ಕೊಮಂಇ 2007, ಬೆಂಗಳೂರು, ದಿನಾಂಕ: 24ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸುವ ಕಾರಣದಿಂದಾಗಿ ಕುಷ್ಠರೋಗದಿಂದ ಗುಣ ಹೊಂದಿದ ವ್ಯಕ್ತಿಗಳು ಅವರ ಹೆಸರಿನಲ್ಲಿ ಯಾವುದೇ ಮನೆ ಅಥವಾ ನಿವೇಶನಗಳನ್ನು ಹೊಂದಿಲ್ಲದೇ ಇದ್ದಲ್ಲಿ ಅಂತಹವರಿಗೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ನಗರ/ ಪಟ್ಟಣ ಪ್ರದೇಶಗಳಲ್ಲಿ ನರ್ಮ್/ ಐಹೆಚ್‌ಎಸ್‌ಡಿಪಿ ಯೋಜನೆಯಲ್ಲಿ ನಿರ್ಮಿಸುವ ವಾಸದ ಮನೆಗಳನ್ನು ವಾರ್ಷಿಕ ವರಮಾನದ ಮಿತಿ ಪರಿಗಣಿಸದೇ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಯುಡಿ 197 ಪಿಹೆಚ್‌ಎಸ್ 92, ದಿನಾಂಕ 11–11–1992ರಲ್ಲಿನ ಷರತ್ತುಗಳನ್ನು ಪೂರೈಸಿದ ವ್ಯಕ್ತಿಗಳಿಗೆ ಮಂಜೂರು ಮಾಡಲು ಸರ್ಕಾರ ಈ ಮೂಲಕ ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 170

**ಜಿ.ಆರ್. ನಾಗರಾಜ**
ಪೀಠಾಧಿಕಾರಿ–4,
ವಸತಿ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುದಾರಣಾ ಸಚಿವಾಲಯ**

**ಸಂಖ್ಯೆ: ಸಿಆಸುಇ 695 ಸೇಅಸೆ 2007, ಬೆಂಗಳೂರು, ದಿನಾಂಕ 3ನೇ ಜನವರಿ 2008**

**ಸುತ್ತೋಲೆ**

**ವಿಷಯ :** ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯು ನಡೆಸುವ ಅಲ್ಪಾವಧಿ ತರಬೇತಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಬಗ್ಗೆ.

ಪ್ರಸಕ್ತ ಯೋಜನೆಗಳಡಿಯಲ್ಲಿ, ಭಾರತೀಯ ಆಡಳಿತ ಸೇವೆಗೆ ಸೇರಿದ ಅಧಿಕಾರಿಗಳು, ಎರಡು ವರ್ಷದ ಬ್ಲಾಕ್ ಅವಧಿಯಲ್ಲಿ ಕನಿಷ್ಠ ಒಂದು ಅಲ್ಪಾವಧಿ ತರಬೇತಿಗೆ ಹಾಜರಾಗಬೇಕು. ತರಬೇತಿಯನ್ನು ಆಯ್ಕೆ ಮಾಡಿಕೊಳ್ಳಲು ಅಧಿಕಾರಿಗಳಿಗೆ ಅವಕಾಶವಿರುವುದರಿಂದ ಈ ತರಬೇತಿಯ ಹೊಂದಾಣಿಕೆ ಮಾಡಿಕೊಳ್ಳಬಹುದಾಗಿದೆ. ಸಿಬ್ಬಂದಿ ಮತ್ತು ತರಬೇತಿ ಇಲಾಖೆಯು ಅಂತರ–ಜಾಲದ ಮೂಲಕ ಅರ್ಜಿಗಳನ್ನು ಅಹ್ವಾನಿಸುತ್ತಿದ್ದು, ರಾಜ್ಯ ಸರ್ಕಾರಗಳ ಮೂಲಕ ಕಳುಹಿಸಲಾಗುತ್ತಿಲ್ಲ. ಸಿಬ್ಬಂದಿ ಮತ್ತು ತರಬೇತಿ ಇಲಾಖೆಯು ಯಾವುದೇ ಅಧಿಕಾರಿಯನ್ನು ತರಬೇತಿಗೆ ಆಯ್ಕೆ ಮಡಿದ್ದಲ್ಲಿ ಆ ಬಗ್ಗೆ ರಾಜ್ಯ ಸರ್ಕಾರದ ಅನುಮೋದನೆ ಇದೆ ಎಂದು ಭಾವಿಸಬೇಕಾಗುತ್ತದೆ. ಆದ್ದರಿಂದ ಈ ಬಗ್ಗೆ ಸಂಬಂಧಿಸಿದ ಅಧಿಕಾರಿಯು ರಾಜ್ಯ ಸರ್ಕಾರದ ಅನುಮೋದನೆ ಕೋರುವ ಅಗತ್ಯವಿಲ್ಲ. ಈ ಬಗ್ಗೆ ಅನಗತ್ಯ ಕಾಲವ್ಯಯವಾಗುವುದಲ್ಲದೆ, ಕೆಲವು ಸಲ ತರಬೇತಿಗೆ ಹಾಜರಾಗದಿರಲು ನೆಪವಾಗಿ ಬಳಸಬಹುದಾಗಿರುವುದರಿಂದ, ಈ ಸಂಬಂಧದಲ್ಲಿ ಸ್ಪಷ್ಟೀಕರಿಸಲಾಗುತ್ತಿದೆ. ಆದ್ದರಿಂದ, ತರಬೇತಿಗೆ ಆಯ್ಕೆಯಾದ ಅಧಿಕಾರಿಯು, ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯಿಂದ ಸ್ವೀಕೃತವಾದ ಈ ಸಂಬಂಧದ ನಾಮ ನಿರ್ದೇಶನ/ ಸೂಚನೆಯ ಪ್ರತಿಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಮಾಹಿತಿಗಾಗಿ ಕಳುಹಿಸತಕ್ಕದ್ದೇ ಹೊರತು, ಈ ಬಗ್ಗೆ ರಾಜ್ಯ ಸರ್ಕಾರದ ಅನುಮೋದನೆ ಕೋರತಕ್ಕದ್ದಲ್ಲವೆಂದು ತಿಳಿಸಲಾಗಿದೆ.

**ತುಷಾರ್ ಗಿರಿನಾಥ್**

ಪಿ.ಆರ್. 183

ಸರ್ಕಾರದ ಅಪರ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು)

**ಶಿಕ್ಷಣ ಸಚಿವಾಲಯ**

**ವಿಷಯ :** ಸಂಸ್ಕೃತ ಕಾಲೇಜುಗಳ ಪ್ರಾಂಶುಪಾಲರುಗಳ ವೇತನ ಶ್ರೇಣಿಯಲ್ಲಿ ಉಂಟಾಗಿರುವ ತಪ್ಪನ್ನು ಸರಿಪಡಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಪತ್ರ ಸಂಖ್ಯೆ: ಸಂಸ್ಕೃತ. ತಿದ್ದುಪಡಿ. 2007–08, ದಿನಾಂಕ 3–9–2007.

**ಪ್ರಸ್ತಾವನೆ :**

ದಿನಾಂಕ 3–9–2008ರ ಪತ್ರದಲ್ಲಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಸಂಸ್ಕೃತ ಕಾಲೇಜುಗಳ ಪ್ರಾಂಶುಪಾಲರುಗಳ ವೇತನ ಶ್ರೇಣಿಯಲ್ಲಿ ಉಂಟಾಗಿರುವ ತಪ್ಪನ್ನು ಸರಿಪಡಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸುತ್ತ, ಅನುದಾನಿತ ಸಂಸ್ಕೃತ ಕಾಲೇಜುಗಳಲ್ಲಿನ ಪ್ರಾಂಶುಪಾಲರುಗಳು ರೂ. 2600–4575 ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಿದ್ದು 1994ರಲ್ಲಿ ವೇತನ ಆಯೋಗದ ಶಿಫಾರಸ್ಸಿನನ್ವಯ ಅವರುಗಳಿಗೆ ರೂ. 3300–5200ರ ವೇತನ ಶ್ರೇಣಿಯನ್ನು ನೀಡಬೇಕಾಗಿದ್ದು ಶಿಕ್ಷಣ ಇಲಾಖೆಯು ವೇತನ ನೀಡುವಲ್ಲಿ ತಪ್ಪಾಗಿರುವುದರಿಂದ 1995ರಿಂದ ಪರಿಷ್ಕೃತ ವೇತನ ಶ್ರೇಣಿಯನ್ನು

ನೀಡುವಂತೆ ಕೋರಿರುತ್ತಾರೆ ಹಾಗೂ ಅವರುಗಳ ವೇತನ ಶ್ರೇಣಿಯನ್ನು 2007ರ ವೇತನ ಆಯೋಗದ ಶಿಫಾರಸ್ಸಿನ ಅನ್ವಯ ನಿಗದಿಪಡಿಸಿರುವ ರೂ. 18150–26925ಕ್ಕೆ ನಿಗದಿಪಡಿಸಿ ಆದೇಶವನ್ನು ಹೊರಡಿಸಬೇಕೆಂದು ಕೋರಿರುತ್ತಾರೆ.

ಸಂಸ್ಕೃತ ಕಾಲೇಜುಗಳ ಪ್ರಾಂಶುಪಾಲರುಗಳ ವೇತನ ಶ್ರೇಣಿಯನ್ನು ನೀಡುವಲ್ಲಿ ಉಂಟಾಗಿರುವ ತಪ್ಪನ್ನು ಸರಿಪಡಿಸುವ ಬಗ್ಗೆ ನಿರ್ದೇಶಕರು ಸಲ್ಲಿಸಿರುವ ಪ್ರಸ್ತಾವನೆಯನ್ನು ನಿಯಮಾನುಸಾರ ಕೂಲಂಕಷವಾಗಿ ಪರಿಶೀಲಿಸಲಾಯಿತು. ಶ್ರೀ ಸಿ. ನಂಜುಂಡಯ್ಯ, ಶ್ರೀ ಜಿ.ಎಲ್. ಭಟ್, ಶ್ರೀ ವಿ.ಜಿ. ಹೆಗಡೆ ಅವರುಗಳಿಗೆ 1995ರಿಂದ ಹಾಗೂ ಶ್ರೀ ವೈ.ಡಿ. ನವಲಗುಂದ ಅವರಿಗೆ 1997 ರಿಂದ ವೇತನ ಶ್ರೇಣಿ ನೀಡುವಲ್ಲಿ ತಪ್ಪಾಗಿದ್ದು ವೇತನ ಆಯೋಗವು ನೀಡಿದ ವೇತನ ಶ್ರೇಣಿಯನ್ನು ನೀಡಿರುವುದಿಲ್ಲ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಇಡಿ 62 ಎಲ್‌ಎಸ್‌ಇ 2007, ಬೆಂಗಳೂರು, ದಿನಾಂಕ: 10ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡ ಸಂಸ್ಕೃತ ಕಾಲೇಜುಗಳ ಪ್ರಾಂಶುಪಾಲರುಗಳ ವೇತನ ಶ್ರೇಣಿಯನ್ನು ಅವರ ಹೆಸರಿನ ಮುಂದೆ ನಮೂದಿಸಿರುವ ಸಾಲಿನಿಂದ ಹಾಗೂ ವೇತನ ಶ್ರೇಣಿಯಲ್ಲಿ ನಿಗದಿಪಡಿಸಿ ಆದೇಶಿಸಿದೆ.

| | | | ರೂ. | ರೂ. |
|---|---|---|---|---|
| 1 | ಶ್ರೀ ಸಿ. ನಂಜುಂಡಯ್ಯ | – 1995 ರಿಂದ | 2600–4575ರ ಬದಲಾಗಿ | 3300–5300 |
| 2 | ಶ್ರೀ ಜಿ.ಎಲ್. ಭಟ್ | – 1995 ರಿಂದ | 2600–4575ರ ಬದಲಾಗಿ | 3300–5300 |
| 3 | ಶ್ರೀ ವಿ.ಜಿ. ಹೆಗಡೆ | – 1995 ರಿಂದ | 2600–4575ರ ಬದಲಾಗಿ | 3300–5300 |
| 4 | ಶ್ರೀ ವೈ.ಡಿ. ನವಲಗುಂದ | – 1997 ರಿಂದ | 2600–4575ರ ಬದಲಾಗಿ | 3300–5300 |

ಸದರಿ ಪ್ರಾಂಶುಪಾಲರುಗಳಿಗೆ ಮೇಲೆ ಹೇಳಿರುವ ವೇತನ ಶ್ರೇಣಿಯನ್ನು ನಿಗದಿಪಡಿಸುವುದರ ಜೊತೆಗೆ 2007ರ ವೇತನ ಆಯೋಗವು ಸಂಸ್ಕೃತ ಕಾಲೇಜುಗಳ ಪ್ರಾಂಶುಪಾಲರ ಹುದ್ದೆಗೆ ನಿಗದಿಪಡಿಸಿರುವ ರೂ. 18150–26925ರ ವೇತನ ಶ್ರೇಣಿಯಲ್ಲಿ ಅವರುಗಳ ವೇತನವನ್ನು ನಿಗದಿಪಡಿಸಲು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 1032 ಐಎಫ್‌ಎಸ್ 2007, ದಿನಾಂಕ 16–11–2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 184

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

**ವಿಷಯ :** ಶ್ರೀ ರಾಜರಾಜೇಶ್ವರಿ ವಿದ್ಯಾ ಸಂಸ್ಥೆ, ಸೋಂದಾ ಸ್ವರ್ಣವಲ್ಲೀ ಮಠ, ಶಿರಸಿ, ಉತ್ತರ ಕನ್ನಡ ಜಿಲ್ಲೆ, ಈ ಸಂಸ್ಕೃತ ಮಹಾ ಪಾಠಶಾಲೆಯ ವಿದ್ವತ್ ತರಗತಿಗಳನ್ನು ಅನುದಾನಕ್ಕೆ ಒಳಪಡಿಸುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಪ್ರೌಢ ಶಿಕ್ಷಣ, ಇವರ ದಿನಾಂಕ 5–10–2007ರ ಹಾಗೂ ದಿನಾಂಕ 1–9–2007ರ ಪತ್ರ ಸಂಖ್ಯೆ: ಸಂಸ್ಕೃತ 1 ಅನುದಾನ 1/2006–07.

2. ಸರ್ಕಾರದ ಆದೇಶ ಸಂಖ್ಯೆ: ಇಡಿ 450 ಎಸ್‌ಇಪಿ 92 ದಿನಾಂಕ 31–10–1995.

**ಪ್ರಸ್ತಾವನೆ :**

1. ನಿರ್ದೇಶಕರು, ಪ್ರೌಢಶಿಕ್ಷಣ, ಇವರು ಶ್ರೀ ರಾಜರಾಜೇಶ್ವರಿ ವಿದ್ಯಾ ಸಂಸ್ಥೆ, ಸೋಂದಾ ಸ್ವರ್ಣವಲ್ಲೀ ಮಠ, ಶಿರಸಿ, ಉತ್ತರ ಕನ್ನಡ ಜಿಲ್ಲೆ, ಈ ಸಂಸ್ಕೃತ ಮಹಾ ಪಾಠಶಾಲೆಯ ವಿದ್ವತ್ ತರಗತಿಗಳನ್ನು ಅನುದಾನಕ್ಕೆ ಒಳಪಡಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿ, ನಿರಂತರ ಸ್ವಾಭಾವಿಕ ಬೆಳವಣಿಗೆಯಲ್ಲಿ ಪ್ರಾರಂಭಿಸಲಾದ ತರಗತಿಗಳನ್ನು ಕಾಲಕಾಲಕ್ಕೆ ಅನುದಾನಕ್ಕೆ ಒಳಪಡಿಸಿ, ಕ್ರಮವಹಿಸಲಾಗುತ್ತಿದ್ದು, 1995–2003ರಲ್ಲಿ ತೆರೆಯಲಾಗಿದ್ದ ವೇಂದಾಂತ, ಮೀಮಾಂಸಾ ಮತ್ತು ಕೃಷ್ಣ ಯಜುರ್ವೇದ ಮೂಲ ತರಗತಿಗಳಿಗೆ ಅನುದಾನರಹಿತ ಮಾನ್ಯತೆ ಪಡೆಯುವ ಮೂಲಕ ಮಹಾ ಪಾಠಶಾಲೆಯಾಗಿ (ಕಾಲೇಜಾಗಿ) ಪರಿವರ್ತಿತಗೊಂಡಿರುತ್ತದೆ ಹಾಗೂ ಸದರಿ ಸಂಸ್ಥೆಯು ಸಾಮಾನ್ಯ ಆಡಳಿತ ವರ್ಗಕ್ಕೆ ಸೇರಿದೆ ಎಂದು ತಿಳಿಸಿರುತ್ತಾರೆ.

2. ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸೂಚಿಸಿರುವ ಸ್ಟಾಫಿಂಗ್ ಪ್ಯಾಟರ್ನ್ ಪ್ರಕಾರ ಇರುವ ಹುದ್ದೆಗಳೆಂದು ತಿಳಿಸುತ್ತ, ಆಗ ಅನುದಾನ ರಹಿತವಾಗಿ ಮಾನ್ಯತೆ ಪಡೆದಿದ್ದ ತರಗತಿಗಳನ್ನು ಈಗ ಅನುದಾನಕ್ಕೆ ಒಳಪಡಿಸಿ ಸದರಿ ತರಗತಿಗಳನ್ನು ನಡೆಸಲು ನೇಮಕಾತಿ ಮಾಡಲಾದ 3 ಬೋಧಕ ಮತ್ತು 1 ಬೋಧಕೇತರ ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸುವಂತೆ ಹಾಗೂ ಸ್ವಾಭಾವಿಕ ಬೆಳವಣಿಗೆಯಿಂದ ಪ್ರಾರಂಭಿಸಿದ ತರಗತಿಗಳ ನಿರ್ವಹಣೆ ಮಾಡಲು ಪ್ರಸ್ತುತ ಅನುದಾನಿತ ಸಂಸ್ಕೃತ ಪಾಠಶಾಲೆಗಳಲ್ಲಿ ಪಾಠ ಮಾಡುತ್ತಿರುವ ಶಿಕ್ಷಕರಿಗೆ ಮುಂಬಡ್ತಿ ನೀಡಿ ನೇಮಿಸಿಕೊಳ್ಳಲು ಅನುಮತಿಯನ್ನು ಸಹ ಕೋರಿರುತ್ತಾರೆ.

3. ನಿರ್ದೇಶಕರು, ಪ್ರೌಢ ಶಿಕ್ಷಣ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಅದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 32 ಎಲ್ಎಸ್ಇ 2007, ಬೆಂಗಳೂರು, ದಿನಾಂಕ: 23ನೇ ಜನವರಿ 2008.**

4. ಶ್ರೀ ರಾಜರಾಜೇಶ್ವರಿ ವಿದ್ಯಾ ಸಂಸ್ಥೆ, ಸೋಂದಾ ಸ್ವರ್ಣವಲ್ಲೀ ಮಠ, ಶಿರಸಿ, ಉತ್ತರ ಕನ್ನಡ ಜಿಲ್ಲೆ, ಈ ಸಂಸ್ಕೃತ ಮಹಾ ಪಾಠಶಾಲೆಯ ವೇದಾಂತ, ಮೀಮಾಂಸಾ ಮತ್ತು ಕೃಷ್ಣ ಯಜುರ್ವೇದ ಮೂಲ ವಿದ್ವತ್ ತರಗತಿಗಳಿಗೆ ಅನುದಾನ ರಹಿತವಾಗಿ ನೀಡಲಾಗಿದ್ದ ಅನುಮೋದನೆಯನ್ನು ಪುನಃ ಪರಿಶೀಲಿಸಿ, ಪ್ರಸ್ತುತ ಅವುಗಳನ್ನು ಹಾಲಿ ಇರುವ ಸಂಸ್ಕೃತ ಪಾಠಶಾಲೆ ಮತ್ತು ಮಹಾ ವಿದ್ಯಾಲಯಗಳ ಅನುದಾನ ಸಂಹಿತೆ ನಿಯಮಗಳನ್ವಯ 2007–08ನೇ ಸಾಲಿನಿಂದ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನಕ್ಕೊಳಪಡಿಸಿ, ಹಾಗೂ ಈ ವಿಷಯಗಳ ತರಗತಿಗಳನ್ನು ಬೋಧಿಸುತ್ತಿರುವ ಈ ಕೆಳಕಂಡ ಮೂರು ಬೋಧಕ ಹುದ್ದೆ ಹಾಗೂ ಬೋಧಕೇತರ ಒಂದು ಹುದ್ದೆಯಲ್ಲಿನ ನೇಮಕಾತಿಯನ್ನು ವಿಧಿಸಿರುವ ಷರತ್ತುಗಳೊಂದಿಗೆ, ಅನುದಾನ ಸಹಿತವಾಗಿ ಅನುಮೋದಿಸಿ ಆದೇಶಿಸಿದೆ.

| ಕ್ರ. ಸಂ | ಹೆಸರು | ವಿಷಯ |
|---|---|---|
| 1 | ಶ್ರೀ ಕೃಷ್ಣಜೋಶಿ ತಂದೆ: ಸುಬ್ರಾಯಜೋಶಿ, ಸಹಾಯಕ ಪ್ರಾಧ್ಯಾಪಕರು | ಮೀಮಾಂಸಾ |
| 2 | ಶ್ರೀ ಶಂಕರಭಟ್ಟ, ತಂದೆ: ನಾಗೇಶಭಟ್ಟ, ಸಹಾಯಕ ಪ್ರಾಧ್ಯಾಪಕರು | ವೇದಾಂತ |
| 3 | ಶ್ರೀ ವಿಘ್ನೇಶ್ವರ ಹಂಗಾರಿ ತಂದೆ: ಉಮಾಮಹೇಶ್ವರ ಹಂಗಾರಿ, ಸಹಾಯಕ ಪ್ರಾಧ್ಯಾಪಕರು | ಸಾಹಿತ್ಯ ಸಹಾಯಕರು |
| 4 | ಶ್ರೀ ಲಕ್ಷ್ಮೀನಾರಾಯಣ ಹೆಗಡೆ, ದ್ವಿತೀಯ ದರ್ಜೆ ಸಹಾಯಕರು | ಬೋಧಕೇತರ ಹುದ್ದೆ |

5. ಕೃಷ್ಣ ಯಜುರ್ವೇದ ತರಗತಿಗಳನ್ನು ಹೆಚ್ಚುವರಿಯಾಗಿ ನಿರ್ವಹಿಸುತ್ತಿರುವ ಶ್ರೀ ನಾಗರಾಜಭಟ್ ತಂದೆ ವೆಂಕಟರಮಣ ಭಟ್, ಸಹ ಶಿಕ್ಷಕರು, ಅವರ ಹುದ್ದೆಯು ಈಗಾಗಲೇ ಅನುದಾನಕ್ಕೊಳಪಟ್ಟಿದ್ದು, ಪ್ರಸ್ತುತ ಅವರು ನಿರ್ವಹಿಸುತ್ತಿರುವ ಸಹ ಶಿಕ್ಷಕ ಹುದ್ದೆಯನ್ನು ಸಹಾಯಕ ಪ್ರಾಧ್ಯಾಪಕ ಹುದ್ದೆಗೆ ಮೇಲ್ದರ್ಜೆಗೇರಿಸಿದೆ. ಹಾಗೂ ಶ್ರೀ ನಾಗರಾಜ ಭಟ್, ಸಹ ಶಿಕ್ಷಕ, ಅವರಿಗೆ ಮುಂಬಡ್ತಿ ನೀಡುವ ಮೂಲಕ ಸದರಿ ಹುದ್ದೆಯನ್ನು ತುಂಬಲು ಆದೇಶಿಸಿದೆ.

6. ಸದರಿ ಸಂಸ್ಥೆಯ ಸಿಬ್ಬಂದಿಗೆ ಕೆಳಕಂಡ ಷರತ್ತಿಗೆ ಒಳಪಟ್ಟು ವೇತನವನ್ನು ಬಿಡುಗಡೆ ಮಾಡಲು ಈ ಮೂಲಕ ಆದೇಶಿಸಿದೆ.

**ನಿಬಂಧನೆಗಳು:**

1. ವೇತನವನ್ನು ಭವಿಷ್ಯಾನ್ವಯ ಅಂದರೆ, ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೊಳಿಸತಕ್ಕದ್ದು;
2. ವೇತನದ ಬಾಕಿಯನ್ನು ನೀಡಲಾಗುವುದಿಲ್ಲ;
3. ಸಿಬ್ಬಂದಿಯ ಹಿಂದಿನ ಸೇವೆಯನ್ನು ರಜೆ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ನಿಯಮಾನುಸಾರ ಪರಿಗಣಿಸತಕ್ಕದ್ದು;
4. ಸಂಸ್ಥೆಯು ಅನುದಾನ ಸಂಹಿತೆ ಹಾಗೂ ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳನ್ನು ಪಾಲಿಸತಕ್ಕದ್ದು;

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1246 ವೆಚ್ಚ 8/2007, ದಿನಾಂಕ 18–1–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 185

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

## ಸಚಿವಾಲಯ ಗ್ರಂಥಾಲಯ

**ವಿಷಯ :** ಸಚಿವಾಲಯ ಗ್ರಂಥಾಲಯಕ್ಕೆ ಕೊಠಡಿ ಸಂಖ್ಯೆ 11ರಲ್ಲಿ ಅಗತ್ಯ ಕಾಮಗಾರಿಗಳನ್ನು ಮಾಡಿಸಲು ತಗಲುವ ವೆಚ್ಚಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಕಾರ್ಯದರ್ಶಿ, ಸಿಆಸುಇ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 20–8–2007ರಂದು ನಡೆದ ಸಭೆಯ ನಡವಳಿಗಳು.
2. ದಿನಾಂಕ 3–9–2007ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 273 ಡಿಬಿಎಂ 2005, ದಿನಾಂಕ 16–10–2007.

4. ಅಧಿಕ್ಷಕ ಅಭಿಯಂತರರು, ಕಟ್ಟಡಗಳ ವೃತ್ತ, ಬೆಂಗಳೂರು ಇವರ ಪತ್ರದ ಸಂಖ್ಯೆ ಅ: ಕವೃ: ಎಇ1: 2007–08/4664–65 ದಿನಾಂಕ 26–10–07.
5. ದಿನಾಂಕ 27–10–2007ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸಗ್ರಇ 2007, ದಿನಾಂಕ 22–12–2007.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 81 ಅಸಪ 2007, ದಿನಾಂಕ 16–1–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ವಿಧಾನಮಂಡಲದ ಗ್ರಂಥಾಲಯಕ್ಕೆ ಕರ್ನಾಟಕ ಸರ್ಕಾರದ ಸಚಿವಾಲಯದ ಗ್ರಂಥಾಲಯವಿರುವ ಜಾಗವನ್ನು ಬಿಟ್ಟುಕೊಡುವ ಬಗ್ಗೆ ವಿವಿಧ ಕಾಮಗಾರಿಗಳಿಗೆ ಗಡುವನ್ನು ನಿಗದಿಪಡಿಸಲಾಗಿದೆ. ಅದರನ್ವಯ ದಿನಾಂಕ 31–12–2007ರ ಒಳಗೆ ಸಚಿವಾಲಯದ ಗ್ರಂಥಾಲಯವು ವಿಧಾನಸೌಧದ ದಾಖಲೆ ಕೊಠಡಿಯಲ್ಲಿ ಅಗತ್ಯತೆ ಇರುವಂತೆ ಲೇಔಟ್ ಡಿಸೈನ್ ಮಾಡಿ ಅದಕ್ಕೆ ಸಂಬಂಧಿಸಿದಂತೆ ಕಾಮಗಾರಿ ಕೈಗೊಂಡು ಗ್ರಂಥಾಲಯವನ್ನು ವರ್ಗಾಯಿಸುವಂತೆ ತೀರ್ಮಾನಿಸಲಾಗಿದೆ. ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಸಚಿವಾಲಯ ಗ್ರಂಥಾಲಯಕ್ಕೆ ಲಭ್ಯವಿರುವ 9790 ಚದರಡಿ ಸ್ಥಳವನ್ನು ಸಚಿವಾಲಯ ಗ್ರಂಥಾಲಯಕ್ಕೆ ಬೇಕಾಗಬಹುದೆಂದು ಅಭಿಪ್ರಾಯಪಡಲಾಗಿ ಅದರಂತೆ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅನುಮೋದನೆ ಪಡೆಯಲು ಸೂಚಿಸಿರುತ್ತಾರೆ. ಓದಲಾದ ಕ್ರಮ ಸಂಖ್ಯೆ (3)ರಲ್ಲಿ ವಿಧಾನಸೌಧದ ನೆಲಮಹಡಿಯಲ್ಲಿ ಲಭ್ಯವಿರುವ 9774 ಚದರಡಿ ಜಾಗವನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಂಥಾಲಯಕ್ಕೆ ಹಂಚಿಕೆ ಮಾಡಲಾಗಿದೆ. ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಅಧೀಕ್ಷಕ ಅಭಿಯಂತರರು ಕಟ್ಟಡಗಳ ವೃತ್ತ, ಬೆಂಗಳೂರು ಇವರು ಕಾಮಗಾರಿ ಬಗ್ಗೆ ಒಟ್ಟು 13 ಅಂದಾಜು ಪಟ್ಟಿಗಳನ್ನು ಸಲ್ಲಿಸಿ ಒಟ್ಟಾರೆ ಮೊತ್ತವಾದ ರೂ. 154.00 ಲಕ್ಷ (ರೂಪಾಯಿಗಳು ಒಂದು ಕೋಟಿ ಐವತ್ನಾಲ್ಕು ಲಕ್ಷ ಮಾತ್ರ) ಠೇವಣಿ ಮಾಡಲು ಕೋರಲಾಗಿತ್ತು. ಠೇವಣಿ ಮಾಡಿದ ನಂತರವೇ ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುವುದೆಂದು ತಿಳಿಸಲಾಗಿತ್ತು. ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸದರಿ ಕಾಮಗಾರಿಗಳಿಗೆ ರೂ. 139.00 ಲಕ್ಷ (ರೂಪಾಯಿಗಳು ಒಂದು ಕೋಟಿ ಮೂವತ್ತೊಂಬತ್ತು ಲಕ್ಷಗಳು ಮಾತ್ರ) 12th financial commission grants (Modernization fund) DPAR ಇದರ ಅಡಿಯಲ್ಲಿ ಮಂಜೂರಾಗಿರುವ ಮೊತ್ತವನ್ನು ಉಪಯೋಗಿಸಿ ಹಾಗೂ ಸಚಿವಾಲಯ ಗ್ರಂಥಾಲಯಕ್ಕೆ ಇರುವ ಬಜೆಟ್ ಅನುದಾನದಲ್ಲಿ ರೂ. 15.00 ಲಕ್ಷ (ರೂಪಾಯಿಗಳು ಹದಿನೈದು ಲಕ್ಷಗಳು ಮಾತ್ರ) ಉಪಯೋಗಿಸುವಂತೆ ಸಮಿತಿಯು ಸೂಚಿಸಿತು. ಓದಲಾದ ಕ್ರಮ ಸಂಖ್ಯೆ (6)ರಲ್ಲಿ ರೂ. 15.00 ಲಕ್ಷಗಳನ್ನು (ರೂಪಾಯಿಗಳು ಹದಿನೈದು ಲಕ್ಷಗಳು ಮಾತ್ರ) ಲೆಕ್ಕಶೀರ್ಷಿಕೆ 2052–00–090–0–01 ಉಪ ಶೀರ್ಷಿಕೆ 059– ಇತರೆ ವೆಚ್ಚಗಳಡಿಯಲ್ಲಿ ಈಗಾಗಲೇ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 6 ಸಗ್ರಇ 2007, ದಿನಾಂಕ 22–12–07ರಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. ಓದಲಾದ ಕ್ರಮ ಸಂಖ್ಯೆ (7)ರಲ್ಲಿ 12ನೇ ಹಣಕಾಸು ಆಯೋಗದ ಸಹಾಯಧನ ಯೋಜನೆಯಡಿಯಲ್ಲಿ 2007–08ನೇ ಸಾಲಿನಲ್ಲಿ ಸರ್ಕಾರಿ ಕಚೇರಿಗಳ ಆಧುನೀಕರಣ ಯೋಜನೆ ಕಾರ್ಯಕ್ರಮದಡಿಯಲ್ಲಿ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಉನ್ನತ ಮಟ್ಟದ ಸಮಿತಿ ಸಭೆಯ ತೀರ್ಮಾನದಂತೆ ಕರ್ನಾಟಕ ಸರ್ಕಾರದ ಸಚಿವಾಲಯ ಗ್ರಂಥಾಲಯದ ನವೀಕರಣಕ್ಕಾಗಿ ಬಾಕಿ ಉಳಿದ ರೂ. 1,39,00,000/– (ರೂಪಾಯಿಗಳು ಒಂದು ಕೋಟಿ ಮೂವತ್ತೊಂಬತ್ತು ಲಕ್ಷಗಳು) ಅನುದಾನಕ್ಕೆ ಲೆಕ್ಕ ಶೀರ್ಷಿಕೆ 2070–00–003–4–02–15 ಇದರ ಅಡಿಯಲ್ಲಿ ಅನುಮೋದನೆ ನೀಡಲಾಗಿದೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಗ್ರಇ 2007, ಬೆಂಗಳೂರು, ದಿನಾಂಕ: 28ನೇ ಜನವರಿ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಂಥಾಲಯವನ್ನು ಕೊಠಡಿ ಸಂಖ್ಯೆ 11ಕ್ಕೆ ಹಂಚಿಕೆ ಮಾಡಲಾದ 9774 ಚದರಡಿ ಜಾಗವನ್ನು ಲೇಔಟ್ ಡಿಸೈನ್ ಮಾಡಿ ಇದಕ್ಕೆ ಸಂಬಂಧಿಸಿದಂತೆ ಕಾಮಗಾರಿ ಕೈಗೊಳ್ಳುವ ಸಲುವಾಗಿ ಅಧೀಕ್ಷಕ ಅಭಿಯಂತರರು ಸಲ್ಲಿಸಿದ ನಕ್ಷೆ ಮತ್ತು 13 ಅಂದಾಜು ಪಟ್ಟಿಗಳಲ್ಲಿ ರೂ. 154.00 ಲಕ್ಷಗಳ (ರೂಪಾಯಿಗಳು ಒಂದು ಕೋಟಿ ಐವತ್ನಾಲ್ಕು ಲಕ್ಷಗಳು ಮಾತ್ರ) ಅಂದಾಜು ಪಟ್ಟಿಯ ಮೊತ್ತದ ಪೈಕಿ ರೂ. 139.00 ಲಕ್ಷ (ರೂಪಾಯಿಗಳು ಒಂದು ಕೋಟಿ ಮೂವತ್ತೊಂಬತ್ತು ಲಕ್ಷಗಳು ಮಾತ್ರ)ಗಳನ್ನು 12th financial commission grants (Modernization fund) DPAR ಲೆಕ್ಕಶಿರ್ಷಿಕೆ 2070–00–003–4–02–15 ಇದರ ಅಡಿಯಲ್ಲಿ ಭರಿಸಲು ಸೂಚಿಸಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ ಆಇ 2235 ವೆಚ್ಚ–5/07, ದಿನಾಂಕ 28–11–07ರಲ್ಲಿ ನೀಡಿರುವ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 189

**ಡೇನಿಯಲ್ ಬರೆಟ್ಟೋ**

ಮುಖ್ಯ ಗ್ರಂಥಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಚಿವಾಲಯ ಗ್ರಂಥಾಲಯ

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ಡಿ.ಟಿ. ಗೋವಿಂದೇಗೌಡ, ಸಹಾಯಕ ನಿರ್ದೇಶಕರು (ಚ.ಫ.) ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ ಉದ್ಯೋಗ ವಿಭಾಗ, ಬೆಂಗಳೂರು ಇವರ ಹಿಂದಿನ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಕುರಿತು.

**ಓದಲಾಗಿದೆ:** ಪತ್ರ ಸಂ. ಉತನಿ/ಉದ್ಯೋಗ/ಆಡಳಿತ–2/ವಿವ–26/2007–08, ದಿ: 18–6–2007.

**ಪ್ರಸ್ತಾವನೆ :**

ಆಯುಕ್ತರು, ಉದ್ಯೋಗ ಮತ್ತು ತರಬೇತಿ, ಬೆಂಗಳೂರುರವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಶ್ರೀ ಡಿ.ಟಿ. ಗೋವಿಂದೇಗೌಡ, ಸಹಾಯಕ ನಿರ್ದೇಶಕರು (ಚ.ಫ.) ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ ಉದ್ಯೋಗ ವಿಭಾಗ, ಬೆಂಗಳೂರು ಇವರು ಸಹಕಾರ ಇಲಾಖೆಯಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಅಧಿಕಾರಿಯಾಗಿ ದಿನಾಂಕ 22–12–1984ರಿಂದ ದಿನಾಂಕ 6–11–1986ವರೆಗೆ ಸಲ್ಲಿಸಿರುವ ಹಿಂದಿನ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಕುರಿತು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 31 ಇಟಿಎಕ್ಸ್ 2007, ಬೆಂಗಳೂರು, ದಿನಾಂಕ: 22ನೇ ಜನವರಿ 2008.**

ಶ್ರೀ ಡಿ.ಟಿ. ಗೋವಿಂದೇಗೌಡ, ಸಹಾಯಕ ನಿರ್ದೇಶಕರು (ಚ.ಫ.) ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, ಉದ್ಯೋಗ ವಿಭಾಗ, ಬೆಂಗಳೂರು ಇವರು ಸಹಕಾರ ಇಲಾಖೆಯಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಅಧಿಕಾರಿಯಾಗಿ ದಿನಾಂಕ 22–12–1984 ರಿಂದ ದಿನಾಂಕ: 6–11–1986ರವರೆಗೆ ಸಲ್ಲಿಸಿರುವ ಸೇವಾವಧಿಯನ್ನು ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರನ್ವಯ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 700 ವೆಚ್ಚ–9/2007, ದಿನಾಂಕ 29–12–2007ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 190

**ಅಬ್ದುಲ್ ರೆಹಮಾನ್**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಒಳಾಡಳಿತ ಸಚಿವಾಲಯ

**ವಿಷಯ :** ಒಳಾಡಳಿತ ಇಲಾಖೆಯ ಜಂಟಿ ಕಾರ್ಯದರ್ಶಿಗಳು ಹಾಗೂ ಉಪ ಕಾರ್ಯದರ್ಶಿಯವರಿಗೆ ನಿರ್ವಹಿಸುವ ವಿಷಯಗಳ ಮರು ಹಂಚಿಕೆಯ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಒಸಾಇ 36 ಸಶಾಶಾ 01, ದಿನಾಂಕ 21–5–2003.
2. ಒಳಾಡಳಿತ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿಯವರ ದಿನಾಂಕ 24–1–2008ರ ಟಿಪ್ಪಣಿ ಸಂಖ್ಯೆ: ಹೆಚ್‌ಡಿ/ ಎಸಿಎಸ್ & ಪಿಎಸ್/ 12/08 ದಿನಾಂಕ 24–1–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 21–5–2003ರಲ್ಲಿ ಒಳಾಡಳಿತ ಇಲಾಖೆಯ ಜಂಟಿ ಕಾರ್ಯದರ್ಶಿಯವರಿಗೆ ಹಾಗೂ ಉಪ ಕಾರ್ಯದರ್ಶಿಯವರು ನಿರ್ವಹಿಸಬೇಕಾದ ವಿಷಯಗಳನ್ನು ಹಂಚಿಕೆ ಮಾಡಲಾಗಿತ್ತು.

2) ಮೇಲೆ ಓದಲಾದ (2)ರ ಟಿಪ್ಪಣಿಯಲ್ಲಿ ಈ ಕೆಳಕಂಡ ಅಧಿಕಾರಿಗಳಿಗೆ, ವಿಷಯಗಳ ಮರು ಹಂಚಿಕೆಯನ್ನು ಮಾಡುವಂತೆ ಹಾಗೂ ಈ ಬಗ್ಗೆ ಆದೇಶ ಹೊರಡಿಸುವಂತೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿರವರು ಆದೇಶಿಸಿರುತ್ತಾರೆ.

1) ಸರ್ಕಾರದ ಜಂಟಿ ಕಾರ್ಯದರ್ಶಿಯವರು
   ಅ) ಪೊಲೀಸ್ ಸೇವೆಗಳು
   ಆ) ಪೊಲೀಸ್ ವೆಚ್ಚ
   ಇ) ಸಮನ್ವಯ ಮತ್ತು ಪತ್ರ ಸ್ವೀಕೃತಿ ಮತ್ತು ರವಾನೆ
   ಈ) ರಹದಾರಿ ಮತ್ತು ವಿದೇಶಿಯರು

2) ಸರ್ಕಾರದ ಉಪ ಕಾರ್ಯದರ್ಶಿಯವರು
ಅ) ಸೆರೆಮನೆ ಮತ್ತು ಸಿನಿಮಾ
ಆ) ಪೊಲೀಸ್ ಸಹಾಯಕ ಸೇವೆಗಳು
ಇ) ಅಪರಾಧಗಳು
ಈ) ಕಾನೂನು & ಸುವ್ಯವಸ್ಥೆ ಹಾಗೂ ಅಭಿಯೋಗಗಳು

3) ಸದರಿ ಟಿಪ್ಪಣಿಯಲ್ಲಿ ಸೂಚಿಸಿರುವಂತೆ ಮಾರ್ಪಡಿಸಿದ ಆದೇಶವನ್ನು ಹೊರಡಿಸುವಂತೆ ಸೂಚಿಸಿರುವ ಮೇರೆಗೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 44 ಸಶಾಶಾ 2004, ಬೆಂಗಳೂರು, ದಿನಾಂಕ: 28ನೇ ಜನವರಿ 2008.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ಒಸಾಇ 36 ಸಶಾಶಾ 01, ದಿನಾಂಕ 21-5-2003 ಅನ್ನು ಭಾಗಶಃ ಮಾರ್ಪಡಿಸಿ, ಒಳಾಡಳಿತ ಇಲಾಖೆಯು ಈ ಕೆಳಕಂಡ ಅಧಿಕಾರಿಗಳಿಗೆ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವಂತೆ ಮಾರ್ಪಡಿಸಿದ ಕಾರ್ಯ ವಿಷಯಗಳ ಮರು ಹಂಚಿಕೆಯನ್ನು ಮಾಡಿ ಆದೇಶಿಸಿದೆ.

1) ಸರ್ಕಾರದ ಜಂಟಿ ಕಾರ್ಯದರ್ಶಿಯವರು
ಅ) ಪೊಲೀಸ್ ಸೇವೆಗಳು
ಆ) ಪೊಲೀಸ್ ವೆಚ್ಚ
ಇ) ಸಮನ್ವಯ ಮತ್ತು ಪತ್ರ ಸ್ವೀಕೃತಿ ಮತ್ತು ರವಾನೆ
ಈ) ರಹದಾರಿ ಮತ್ತು ವಿದೇಶಿಯರು

2) ಸರ್ಕಾರದ ಉಪ ಕಾರ್ಯದರ್ಶಿಯವರು
ಅ) ಸೆರೆಮನೆ & ಸಿನಿಮಾ
ಆ) ಪೊಲೀಸ್ ಸಹಾಯಕ ಸೇವೆಗಳು
ಇ) ಅಪರಾಧಗಳು (ಎ ಮತ್ತು ಬಿ)
ಈ) ಕಾನೂನು & ಸುವ್ಯವಸ್ಥೆ & ಅಭಿಯೋಗಗಳು & ಕಾಫಿಪೋಸ

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 191

**ಟಿ.ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಸಮನ್ವಯ)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಶ್ರೀ ಎನ್.ಎಂ. ಉದಯಶಂಕರ್, ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಧಾರವಾಡ ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಜರುಗಿಸುವ ಕುರಿತು - ಪ್ರಕರಣವನ್ನು ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಅಪರ ನಿಬಂಧಕರು, ವಿಚಾರಣೆ-2, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: Compt. UPLOK/BGM/183/2007-ARE-2, ದಿನಾಂಕ: 28-11-2007.

**ಪ್ರಸ್ತಾವನೆ :**

ಧಾರವಾಡ ಜಿಲ್ಲೆಯ ಹಿರಿಯ ಭೂವಿಜ್ಞಾನಿಯಾದ ಶ್ರೀ ಎನ್.ಎಂ. ಉದಯಶಂಕರ್, ಇವರು ರಾಣೆಬೆನ್ನೂರು ತಾಲ್ಲೂಕಿನ ಬೇಲೂರು ಗ್ರಾಮದಲ್ಲಿ ಶ್ರೀ ಹೇಮಣ್ಣ ಸಿ. ಗೊಲ್ಲಾರ್ ಇವರಿಗೆ ಮರಳು ಗುತ್ತಿಗೆಯನ್ನು ಮಂಜೂರು ಮಾಡುವ ವಿಚಾರದಲ್ಲಿ ಗುತ್ತಿಗೆದಾರರೊಂದಿಗೆ ಶಾಮೀಲಾಗಿರುವುದಾಗಿ ಆರೋಪಿಸಿ, ಶ್ರೀ ಸುರೇಂದ್ರ ಶಿವಪ್ಪ ಜ್ಯೋತಿ ಇವರು ಮಾನ್ಯ ಲೋಕಾಯುಕ್ತರಿಗೆ ದೂರನ್ನು ಸಲ್ಲಿಸಿರುವುದಾಗಿ, ಈ ದೂರನ್ನು ಆಧರಿಸಿ ಪ್ರತಿವಾದಿಗಳಿಂದ ಲಿಖಿತ ಹೇಳಿಕೆಗಳನ್ನು ಪಡೆದು ಪರಿಶೀಲಿಸಲಾಗಿ, ಶ್ರೀ ಹೇಮಣ್ಣ ಸಿ. ಗೊಲ್ಲಾರ್, ಮರಳು ಗುತ್ತಿಗೆದಾರರು ಇವರ ಮರಳು ಗುತ್ತಿಗೆ ನವೀಕರಣಕ್ಕೆ ಸಂಬಂಧಿಸಿದಂತೆ, ಗುತ್ತಿಗೆದಾರರು ಸರ್ಕಾರಕ್ಕೆ ಬಾಕಿ ಇದ್ದಂತಹ ರೂ. 3.40 ಲಕ್ಷಗಳ ಬಗ್ಗೆ ಜಿಲ್ಲಾ ಉಸ್ತುವಾರಿಯ ಸಮಿತಿಯ ಗಮನಕ್ಕೆ ಹಿರಿಯ ಭೂವಿಜ್ಞಾನಿಯವರು ತರದೇ ಇರುವಂತಹ ವಿಷಯವು ಮೇಲ್ನೋಟಕ್ಕೆ ಕಂಡುಬಂದಿದ್ದು, ಇದರಿಂದಾಗಿ ಶ್ರೀ ಎನ್.ಎಂ. ಉದಯಶಂಕರ್ ಇವರು ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ವರ್ತನೆಯನ್ನು ಮಾಡಿರುವುದು ಕಂಡುಬಂದಿರುವುದರಿಂದ ಸದರಿ ಅಧಿಕಾರಿಯ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ-11ರ ಪ್ರಕಾರ ಶಿಸ್ತಿನ ಕ್ರಮವನ್ನು ಜರುಗಿಸುವಂತೆ ಹಾಗೂ ಈ ರೀತಿ ನಡೆಸಲಾಗುವ ವಿಚಾರಣೆಯನ್ನು ಇದೇ ನಿಯಮಾವಳಿಗಳ ನಿಯಮ 14(A) ಪ್ರಕಾರ ಮಾನ್ಯ ಲೋಕಾಯುಕ್ತರ ಕಛೇರಿಗೆ

ವಹಿಸಿಕೊಡುವಂತೆ ಮಾನ್ಯ ಉಪ ಲೋಕಾಯುಕ್ತ ಇವರು ಶಿಫಾರಸ್ಸು ಮಾಡಿರುವುದಾಗಿ ತಿಳಿಸುತಾ, ಅಂತೆಯೇ ಕ್ರಮವನ್ನು ತೆಗೆದುಕೊಳ್ಳುವಂತೆ ಅಪರ ನಿಬಂಧಕರು, ವಿಚಾರಣೆ– II ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 123 ಎಂಜಿಎಸ್ 2007, ಬೆಂಗಳೂರು, ದಿನಾಂಕ: 17ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಶ್ರೀ ಎನ್.ಎಂ. ಉದಯಶಂಕರ್, ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಧಾರವಾಡ ಇವರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರ ಪ್ರಕಾರ ವಿಚಾರಣೆಯನ್ನು ನಡೆಸಲು ಸರ್ಕಾರದ ಅನುಮತಿಯನ್ನು ನೀಡಿದೆ.

ಅಂತೆಯೇ, ಈ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 14(A)ರ ಪ್ರಕಾರ ಕರ್ನಾಟಕ ಲೋಕಾಯುಕ್ತರ ಕಛೇರಿಗೆ ಸರ್ಕಾರವು ವಹಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 203

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಗಣಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯದ ತಾಲ್ಲೂಕು ಕೇಂದ್ರಗಳಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು ಗ್ರಾಮ ಸ್ವರಾಜ್ ಯೋಜನೆಯಡಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 69 ಗ್ರಾಸ್ವಯೋ 2006, ದಿನಾಂಕ 4–1–2007 ಮತ್ತು 25–4–2007.

**ಪ್ರಸ್ತಾವನೆ :**

ವಿಶ್ವಬ್ಯಾಂಕ್ ನೆರವಿನ ಗ್ರಾಮ ಸ್ವರಾಜ್–ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಲ್ಲಿ ಸಾಮರ್ಥ್ಯಸೌಧ ನಿರ್ಮಾಣ ಮಾಡಲು 2006–07 ಮತ್ತು 2007–08ನೇ ಸಾಲಿನಲ್ಲಿ ಮೇಲೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಮೊದಲನೇ ಕಂತಾಗಿ ಸಂಡೂರು, ಭೈಲಹೊಂಗಲ, ಸವದತ್ತಿ ಮತ್ತು ರಾಮದುರ್ಗ ತಾಲ್ಲೂಕು ಪಂಚಾಯತಿಗಳಿಗೆ ತಲಾ ರೂ. 6.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಬಿಡುಗಡೆಯಾದ ಅನುದಾನವನ್ನು ವಿನಿಯೋಗಿಸಿ ಹಣ ಬಳಕೆ ಉಪಯೋಗಿತಾ ಪತ್ರ/ ಪ್ರಗತಿ ವರದಿಗಳನ್ನು ಸಲ್ಲಿಸಿ, ಉಳಿದ ಹಣವನ್ನು ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದೆ. ಈ ತಾಲ್ಲೂಕು ಪಂಚಾಯತ್‌ಗಳಿಗೆ ಬಾಕಿ ಉಳಿದ ಕ್ರಮವಾಗಿ ತಲಾ ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 119 ಗ್ರಾಸ್ವಯೋ 2007, ಬೆಂಗಳೂರು, ದಿನಾಂಕ: 22ನೇ ಜನವರಿ 2008.**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ 04 ತಾಲ್ಲೂಕು ಪಂಚಾಯತ್‌ಗಳಿಗೆ ಅವುಗಳಿಗೆ ಎದುರಿಗೆ ಅನುಬಂಧದ ಕಾಲಂ 7ರಲ್ಲಿ ತೋರಿಸಿದಂತೆ ಎರಡನೇ ಕಂತಿನ ಅನುದಾನವನ್ನು ಒಟ್ಟು ರೂ. 40.00 ಲಕ್ಷ (ನಲವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಸರ್ಕಾರ ಬಿಡುಗಡೆ ಮಾಡಿದೆ.

ತಾಲ್ಲೂಕು ಪಂಚಾಯತ್‌ಗಳು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳು ಹಾಗೂ ಗ್ರಾಮ ಸ್ವರಾಜ್ ಯೋಜನೆಯಲ್ಲಿ ಹೊರಡಿಸಿದ ಸಂಗ್ರಹಣಾ ಕೈಪಿಡಿ ಅನ್ವಯ ಸಾಮರ್ಥ್ಯಸೌಧದ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲು ಸೂಚಿಸಿದೆ. ಕರ್ನಾಟಕ ತಾಲ್ಲೂಕು ಪಂಚಾಯತಿಗಳ (ಹಣಕಾಸು ಮತ್ತು ಲೆಕ್ಕ) ಕೈಪಿಡಿ ನಿಯಮ 1996ರ ನಿಯಮ 47(2)ರ ಪ್ರಕಾರ ಜಿಲ್ಲಾ ಪಂಚಾಯತಿಯಿಂದ ಅನುಷ್ಠಾನಗೊಳಿಸಬಹುದು. ಸದರಿ ವೆಚ್ಚವನ್ನು 2007–08ನೇ ಸಾಲಿನ ಲೆಕ್ಕಶೀರ್ಷಿಕೆ 2515–00–101–0–80–059 (ಯೋಜನೆ) ಕರ್ನಾಟಕ ಗ್ರಾಮೀಣ ಬಡತನ ಹಾಗೂ ಪಂಚಾಯತಿ ಯೋಜನೆಯಡಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: FD 7 ZPA 2003, ದಿನಾಂಕ 14–7–2005ರ ಸೂಚನೆಗಳನ್ವಯ ಭರಿಸುವುದು. ಈ ಅನುದಾನವನ್ನು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿರುವುದರಿಂದ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ಗಳು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಂದ ಸದರಿ ಮೊತ್ತವನ್ನು ಅಪ್‌ಲೋಡ್ ಮಾಡಿಸಿಕೊಳ್ಳಲು ಕ್ರಮ ತೆಗೆದುಕೊಳ್ಳಬಹುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-7-1996ರಲ್ಲಿ ಆಡಳಿತಾತ್ಮಕ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬೂವನಹಳ್ಳಿ ನಾಗರಾಜ್**

ಸಹಾಯಕ ಅಭಿವೃದ್ಧಿ ಆಯುಕ್ತರು,
ಹಾಗೂ ಸರ್ಕಾರದ ಪದನಿಮಿತ್ತ ಅಧೀನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 119 ಗ್ರಾಸ್ವಯೋ 2007, ದಿನಾಂಕ 22-1-2008ರ ಅನುಬಂಧ ಸಾಮರ್ಥ್ಯಸೌಧ ನಿರ್ಮಾಣಕ್ಕಾಗಿ ಎರಡನೇ ಕಂತಿನ ಅನುದಾನ ಬಿಡುಗಡೆ**

(ರೂ. ಲಕ್ಷಗಳಲ್ಲಿ)

| ಕ್ರ ಸಂ | ಜಿಲ್ಲೆ | ತಾಲ್ಲೂಕು ಪಂಚಾಯತ್ | ಅಂದಾಜು ಮೊತ್ತ | ಯೋಜನೆಯಡಿ ನಿಗಧಿಯಾದ ಮೊತ್ತ | ಮೊದಲನೇ ಕಂತಿನ ಅನುದಾನ ಬಿಡುಗಡೆ | ಎರಡನೇ ಕಂತಾಗಿ ಬಿಡುಗಡೆ ಮಾಡಿದ ಮೊತ್ತ | ಒಟ್ಟು ಮೊತ್ತ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬಳ್ಳಾರಿ | 1) ಸಂಡೂರು | 16.00 | 16.00 | 6.00 | 10.00 | 16.00 |
| 2 | ಬೆಳಗಾವಿ | 2) ಭೈಲಹೊಂಗಲ | 18.00 | 16.00 | 6.00 | 10.00 | 16.00 |
| | | 3) ಸವದತ್ತಿ | 18.50 | 16.00 | 6.00 | 10.00 | 16.00 |
| | | 4) ರಾಮದುರ್ಗ | 18.00 | 16.00 | 6.00 | 10.00 | 16.00 |
| | | | | | **ಒಟ್ಟು ಮೊತ್ತ** | **40.00** | |

**ಬೂವನಹಳ್ಳಿ ನಾಗರಾಜ್**

ಪಿ.ಆರ್. 218

ಸಹಾಯಕ ಅಭಿವೃದ್ಧಿ ಆಯುಕ್ತರು,
ಹಾಗೂ ಸರ್ಕಾರದ ಪದನಿಮಿತ್ತ ಅಧೀನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ :** 20 ವರ್ಷಗಳಿಗೂ ಮೇಲ್ಪಟ್ಟು ಕೃಷಿ ಸಹಾಯಕರ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವ ನೌಕರರನ್ನು ಸಹಾಯಕ ಕೃಷಿ ಅಧಿಕಾರಿ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಕೃಷಿ ಆಯುಕ್ತರ ಪತ್ರ ಸಂಖ್ಯೆ: ಕೃಇಸಿ 1 ಸಮೀಕ್ಷೆ 38/03-04, ದಿನಾಂಕ 18-5-2006, 12-12-2006 ಮತ್ತು ದಿನಾಂಕ 4-5-2007.

**ಪ್ರಸ್ತಾವನೆ :**

ಕೃಷಿ ಆಯುಕ್ತರು ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ಕೃಷಿ ಇಲಾಖೆಯಲ್ಲಿ ಕೃಷಿ ಸಹಾಯಕರುಗಳು 25 ವರ್ಷಕ್ಕಿಂತ ಹೆಚ್ಚು ಸೇವೆಯನ್ನು ಒಂದೇ ಹುದ್ದೆಯಲ್ಲಿ ಪೂರ್ಣಗೊಳಿಸಿದ್ದರೂ ಸಹ ಒಂದು ಬಡ್ತಿಯು ದೊರಕಿರುವುದಿಲ್ಲ. ಇವರುಗಳು ಇನ್ನು 2-3 ವರ್ಷಗಳಲ್ಲಿ ನಿವೃತ್ತರಾಗುವರು. ಇದಲ್ಲದೇ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಏಕ ರೀತಿಯಲ್ಲಿ ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳನ್ನು ಉಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ಇಲಾಖೆಯಲ್ಲಿನ ಎಲ್ಲಾ ಕೃಷಿ ಸಹಾಯಕ ಹುದ್ದೆಯನ್ನು ಸಹಾಯಕ ಕೃಷಿ ಅಧಿಕಾರಿಗಳ ಹುದ್ದೆಗೆ (ವೇತನ ಶ್ರೇಣಿ ರೂ. 10800-ರೂ. 20025ರಲ್ಲಿ) ಉನ್ನತೀಕರಿಸಲು ಕೋರಿರುತ್ತಾರೆ. ಅಲ್ಲದೆ ಈಗಿರುವ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಕೃಷಿ ಸಹಾಯಕರ ಹುದ್ದೆಯನ್ನು ಡೈಯಿಂಗ್ ಕೇಡರ್ (Dying Cadre) ಎಂದು ಪರಿಗಣಿಸಿದ್ದು, ಈ ಹುದ್ದೆಗಳ ನೇಮಕಾತಿಯನ್ನು ಸ್ಥಗಿತಗೊಳಿಸಿದೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಷರತ್ತಿಗೊಳಪಟ್ಟು 20 ವರ್ಷಗಳ ಸೇವೆಯನ್ನು ನಿರಂತರವಾಗಿ ಕೃಷಿ ಸಹಾಯಕ ವೃಂದದಲ್ಲಿ ನಿರ್ವಹಿಸಿರುವ ಕೃಷಿ ಸಹಾಯಕರುಗಳ ಹುದ್ದೆಯನ್ನು ಸಹಾಯಕ ಕೃಷಿ ಅಧಿಕಾರಿ ಹುದ್ದೆಗೆ ಉನ್ನತೀಕರಿಸಲು ತೀರ್ಮಾನಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 89 ಕೃಪಸೇ 2006, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಕೃಷಿ ಇಲಾಖೆಯಲ್ಲಿ 20 ವರ್ಷಗಳಿಗೂ ಮೇಲ್ಪಟ್ಟು ಸೇವೆ ಸಲ್ಲಿಸಿರುವ ಕೃಷಿ ಸಹಾಯಕರುಗಳ ಸಂಖ್ಯೆಗೆ ಸಮವಾದ ಕೃಷಿ ಸಹಾಯಕ ಹುದ್ದೆಗಳನ್ನು ಸಹಾಯಕ ಕೃಷಿ ಅಧಿಕಾರಿ ಹುದ್ದೆಗೆ (ವೇತನ ಶ್ರೇಣಿ ರೂ. 10,800-20,025ರಲ್ಲಿ) ಈ ಕೆಳಕಂಡ ಷರತ್ತಿಗೊಳಪಟ್ಟು ಉನ್ನತೀಕರಿಸಿ ಆದೇಶಿಸಿದೆ.

1. ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ರದ್ದಾದ ಪ್ರತಿ 2 (ಎರಡು) ಕೃಷಿ ಸಹಾಯಕ ಹುದ್ದೆಗೆ ಎದುರಾಗಿ ಒಂದು ಸಹಾಯಕ ಕೃಷಿ ಅಧಿಕಾರಿ ಹುದ್ದೆ ಸೃಜಿಸಲು ಅವಕಾಶವಿದೆ. ಹಾಗೆ ಉನ್ನತೀಕರಿಸುವಾಗ ಶೇಕಡ 50ರಷ್ಟು ಹುದ್ದೆಗಳನ್ನು ತಾತ್ಕಾಲಿಕವಾಗಿಯೂ, ಉಳಿದ ಶೇಕಡ 50ರಷ್ಟು ಹುದ್ದೆಗಳನ್ನು ಉನ್ನತೀಕರಿಸುವ ದಿನಾಂಕದಂದು ಲಭ್ಯವಿರುವ ಖಾಲಿ ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳನ್ನು ಹೊರತುಪಡಿಸಿ ಖಾಯಂ ಆಧಾರದ ಮೇಲೆ ಉನ್ನತೀಕರಿಸುವುದು. ತಾತ್ಕಾಲಿಕವಾಗಿ ಉನ್ನತೀಕರಿಸಲ್ಪಟ್ಟ ಶೇಕಡ 50ರಷ್ಟು ಹುದ್ದೆಗಳು ಈ ಕೇಡರ್‌ನಲ್ಲಿನ ಅಧಿಕಾರಿಗಳು ನಿವೃತ್ತರಾದಂತೆ ರದ್ದಾಗುತ್ತದೆ. ಇದರಿಂದ ವೃಂದ ಮತ್ತು ನೇಮಕಾತಿ ನಿಯಮದ ಅನುಪಾತ ಪಾಲಿಸಲು ಅನುವಾಗುತ್ತದೆ. ಹಾಗೆ ಉನ್ನತೀಕರಿಸಿದ ಹುದ್ದೆಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳಿಗನುಸಾರವಾಗಿ ಅರ್ಹರಾದ ಮತ್ತು 20 ವರ್ಷ ಸೇವೆ ಸಲ್ಲಿಸಿರುವ ಕೃಷಿ ಸಹಾಯಕರನ್ನು ಪದೋನ್ನತಿಗೊಳಿಸಿ ನೇಮಿಸುವುದು.
2. ಕೃಷಿ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವವರನ್ನು ಸಹಾಯಕ ಕೃಷಿ ಅಧಿಕಾರಿ ಹುದ್ದೆಗೆ ಪರಿಗಣಿಸಿದ ತಕ್ಷಣ ಖಾಲಿಯಾದ ಅಷ್ಟೇ ಕೃಷಿ ಸಹಾಯಕರ ಹುದ್ದೆಗಳನ್ನು ರದ್ದು ಪಡಿಸುವುದು..
3. ಹಾಗೆ ರದ್ದುಗೊಂಡ ಕೃಷಿ ಸಹಾಯಕರ ಹುದ್ದೆಗಳಿಗೆ ಬದಲಾಗಿ ವೃಂದ ಮತ್ತು ನೇಮಕಾತಿ ನಿಯಮಗಳಂತೆ 2:1ರ ಅನುಪಾತದಲ್ಲಿ ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳನ್ನು ಮತ್ತೆ ಸೃಜನ ಮಾಡತಕ್ಕದ್ದಲ್ಲ.
4. ಈ ಆದೇಶವು ಕೃಷಿ ಸಹಾಯಕರ ಹುದ್ದೆಯಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವ ಎಲ್ಲ ಕೃಷಿ ಸಹಾಯಕರೂ ಪದೋನ್ನತಿ ಹೊಂದುವವರೆಗೆ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 184 ವೆಚ್ಚ–4/2007, ದಿನಾಂಕ 30–10–2007ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 219

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ

## ENERGY SECRETARIAT

**No. EN 8 NCE 2008, Bangalore, Date 23rd January 2008**

## CORRIGENDUM

In Government Order No. EN 31 NCE 2004 dated: 17-12-2004 (Enhancement order of wind power capacity of M/s. Chitradurga Wind Power Pvt. Ltd.) wherever the name appear as

"Harapanahalli – 48M/13"

**Shall be read as**

"Harapanahalli -48N/13".

By order and in the name of the President of India,

PR. 222

**SURESH B. KRISHNAPPANAVAR**

Under Secretary to Government,

Energy Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಂಗ ಅಧಿಕಾರಿಗಳನ್ನು 60 ವರ್ಷ ವಯೋಮಿತಿ ತಲುಪುವವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿಓಬಿ (1): 250: 2007, ದಿನಾಂಕ 18–1–2008.

**ಪ್ರಸ್ತಾವನೆ :**

ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು 58 ವರ್ಷಗಳ ನಂತರವೂ ಮುಂದುವರಿಸುವ ಬಗ್ಗೆ ಕರ್ನಾಟಕ ಉಚ್ಚ ನ್ಯಾಯಾಲಯದ ಸ್ಕ್ರಿನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷದ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದ್ದಲ್ಲಿ ಕರ್ನಾಟಕ ನಾಗರೀಕಾ ಸೇವಾ ನಿಯಮಾವಳಿಯ ನಿಯಮ 95(ಎ)ರ ಅನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳವರೆಗೆ ಮುಂದುವರಿಸಬಹುದಾಗಿದೆ. ಅದರಂತೆ ಕೆಳಕಂಡ 6 ಜಿಲ್ಲಾ ನ್ಯಾಯಾಧೀಶರುಗಳ ಗೌಪ್ಯ ವರದಿ ಹಾಗೂ ಇತರೆ ದಾಖಲೆಗಳನ್ನು ಪರಿಶೀಲಿಸಿ ಅವರುಗಳನ್ನು ನ್ಯಾಯಾಲಯದ ಪೂರ್ಣ ಪೀಠವು ಅನುಮೋದಿಸಿರುವುದಾಗಿ

ಮೇಲೆ ಓದಲಾದ ದಿನಾಂಕ 18–1–2008ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ತಿಳಿಸಿ ಕೆಳಕಂಡ 6 ಜಿಲ್ಲಾ ನ್ಯಾಯಾಧೀಶರುಗಳು, ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕದಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಲಿದ್ದು ಇವರುಗಳ ಸೇವೆಯನ್ನು 58 ವರ್ಷಗಳ ನಂತರ 60 ವರ್ಷಗಳವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರದ ಆದೇಶ ಕೋರಿರುತ್ತಾರೆ.

| ಕ್ರ. ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು | 58 ವರ್ಷ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1 | ಶ್ರೀ ಕೆ. ಮನಮೋಹನ | 31–1–2008 |
| 2 | ಶ್ರೀ ಎ.ಹೆಚ್. ಅದಪ್ಪನವರ್ | 29–2–2008 |
| 3 | ಶ್ರೀ ಎಸ್.ಸಿ. ಇಂಗ್ಲಾಗೀ | 29–2–2008 |
| 4 | ಶ್ರೀ ಎನ್. ನಾರಾಯಣ | 30–4–2008 |
| 5 | ಶ್ರೀ ವಿ.ಎಂ. ಆರಾಧ್ಯ | 30–4–2008 |
| 6 | ಶ್ರೀ ಎಸ್.ಎನ್. ನವಲಗುಂದ್ | 31–5–2008 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಸೇಉನ್ಯಾ 2008, ಬೆಂಗಳೂರು, ದಿನಾಂಕ: 29ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡ 6 ಜನ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕಗಳಂದು ಅವರು 58 ವರ್ಷಗಳ ವಯೋಮಿತಿ ಪೂರೈಸಿದ ನಂತರವೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 60 ವರ್ಷಗಳ ವಯೋಮಿತಿಯವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರವು ಆದೇಶಿಸಿದೆ.

| ಕ್ರ. ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು ಮತ್ತು ಪದನಾಮ | 58 ವರ್ಷಗಳ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1 | ಶ್ರೀ ಕೆ. ಮನಮೋಹನ್,<br>ಪ್ರಿಸೈಡಿಂಗ್ ಆಫೀಸರ್, ಫಾಸ್ಟ್ ಟ್ರಾಕ್ ಕೋರ್ಟ್–2, ಕೋಲಾರ | 31–1–2008 |
| 2 | ಶ್ರೀ ಎ.ಹೆಚ್. ಆದಪ್ಪನವರ್,<br>ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ | 29–2–2008 |
| 3 | ಶ್ರೀ ಎಸ್.ಸಿ. ಇಂಗ್ಲಾಗೀ,<br>16ನೇ ಅಪರ ಸಿಟಿ ಸಿವಿಲ್ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ನಗರ | 29–2–2008 |
| 4 | ಶ್ರೀ ಎನ್. ನಾರಾಯಣ,<br>3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುಮಕೂರು | 30–4–2008 |
| 5 | ಶ್ರೀ ವಿ.ಎಂ. ಆರಾಧ್ಯ,<br>ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು | 30–4–2008 |
| 6 | ಶ್ರೀ ಎಸ್.ಎನ್. ನವಲಗುಂದ್,<br>ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ | 31–5–2008 |

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 223

**ಕೆ.ಜಿ. ಅನಂತ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಾಂತ್ರಿಕ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 389 ಎಸ್ಎಎಸ್ 07, ದಿನಾಂಕ 1–1–2008.

2. ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಪಿಎಆರ್ 11 ಎಸ್ಎಎಸ್ 8, ದಿನಾಂಕ 9–1–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ 1–1–2008ರ ಅಧಿಸೂಚನೆಯಲ್ಲಿ ಶ್ರೀ ಎಂ.ಎನ್. ವಿದ್ಯಾಶಂಕರ್, ಭಾ.ಆ.ಸೇ (ಕೆಎನ್–82) ಇವರಿಗೆ ಸೂಪರ್ ಟೈಂ ಸ್ಕೇಲ್‌ಗೆ ಬಡ್ತಿ ನೀಡಿ ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಾಂತ್ರಿಕ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ನೇಮಿಸಲಾಗಿದೆ. ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ 9–1–2008ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ ಹುದ್ದೆಗೆ ಮೇಲ್ದರ್ಜೆಗೇರಿಸಿ ಆದೇಶ ಹೊರಡಿಸುವಂತೆ ಸಿಆಸುಇ (ಸೇವೆಗಳು–1) ಶಾಖೆಯು ಕೋರಿದೆ.

ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 60 ಸಅಸೇ 2008, ಬೆಂಗಳೂರು, ದಿನಾಂಕ: 30ನೇ ಜನವರಿ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಾಂತ್ರಿಕ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ 1–1–2008 ರಿಂದ ಜಾರಿಗೆ ಬರುವಂತೆ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 234

**ಕೆ.ಜಿ. ಅನಂತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ (ಸೇವೆಗಳು–3)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ದೇವನಹಳ್ಳಿ ಇಲ್ಲಿನ ಇಲಾಖಾ ವಾಹನ ಸಂಖ್ಯೆ: ಸಿಎಜಿ 7202ರ ದುರಸ್ತಿ ಬಾಬ್ತು ರೂ. 30,290/–ಗಳ ಮಂಜೂರಾತಿ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ(2)/ವಾಹನ/80/2006–07, ದಿನಾಂಕ 5–3–2007, 22–6–2007 ಹಾಗೂ 3–10–2007.

**ಪ್ರಸ್ತಾವನೆ :**

ಇಲಾಖಾ ವಾಹನ ಸಂಖ್ಯೆ: ಸಿಎಜಿ 7202 ಈ ವಾಹನವು ಹಿಂದೆ ರೇಷ್ಮೆ ಉಪ ನಿರ್ದೇಶಕರ ಕಛೇರಿ, ಮೇಲ್ವಿಚಾರಣ ದಳ, ಬೆಂಗಳೂರು ಇಲ್ಲಿರುವಾಗ ದುರಸ್ತಿಗೆ ಬಂದಿದ್ದು, ವಾಹನವು ನಿಲುಗಡೆಯಲ್ಲಿರುತ್ತದೆ. ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ದೇವನಹಳ್ಳಿ ಇಲ್ಲಿಗೆ ಈ ವಾಹನವನ್ನು ದಿನಾಂಕ 15–7–2006ರಲ್ಲಿ ಹಂಚಿಕೆ ಮಾಡಲಾಗಿರುತ್ತದೆ. ಸದರಿ ಕಛೇರಿಗೆ ವಾಹನದ ಅವಶ್ಯಕತೆ ಇರುವುದರಿಂದ ವಾಹನದ ದುರಸ್ತಿಗಾಗಿ ಕ್ರಮ ಕೈಗೊಳ್ಳಲಾಗಿದೆ ಎಂದು, ವಾಹನವು ಪ್ರಸ್ತುತ ನಿಲುಗಡೆಯಲ್ಲಿದ್ದು, ದುರಸ್ತಿಯಾಗದಿದ್ದಲ್ಲಿ ಇನ್ನಷ್ಟು ಹಾನಿಗೊಳಗಾಗುವ ಸಂಭವವಿರುವುದರಿಂದ ದುರಸ್ತಿಗಾಗಿ ಕ್ರಮವಹಿಸಿರುವ ಬಗ್ಗೆ ತಿಳಿಸಿ, ದುರಸ್ತಿಗಾಗಿ ದಿನಾಂಕ 26–7–2006ರಲ್ಲಿ ಪ್ರಕಟಣೆ ಹೊರಡಿಸಿ, ಸ್ಪರ್ಧಾತ್ಮಕ ದರ ಪಟ್ಟಿಗಳನ್ನು ಪಡೆದು ಅದರಲ್ಲಿ ಕಡಿಮೆ ಇರುವ ದರಪಟ್ಟಿಯ ದರವನ್ನು ಅಂಗೀಕರಿಸಲಾಗಿದೆ ಎಂದು ತಿಳಿಸಿ, ದುರಸ್ತಿಯ ವಿವರಗಳನ್ನು ಒದಗಿಸಿ, ಪ್ರಸ್ತಾವಿಸಿರುವ ದುರಸ್ತಿಗಳು ಸಣ್ಣ/ದೊಡ್ಡ ಪ್ರಮಾಣದ ದುರಸ್ತಿ ವ್ಯಾಪ್ತಿಗೆ ಒಳಪಟ್ಟಿದ್ದು, ದೊಡ್ಡ ಪ್ರಮಾಣದ ದುರಸ್ತಿಗೆ ವಾಹನವು ನಿಗದಿತ ದೂರ ಕ್ರಮಿಸದ ಕಾರಣ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಇಲಾಖಾ ಕೆಲಸದ ದೃಷ್ಟಿಯಿಂದ ವಾಹನ ಸಂಖ್ಯೆ ಸಿಎಜಿ 7202ರ ದುರಸ್ತಿ ಬಾಬ್ತು ರೂ. 30,290/–ಗಳಿಗೆ ಲೆಕ್ಕಶೀರ್ಷಿಕೆ 2851–00–107–1–01 (ಯೋಜನೇತರ) ಅಡಿಯಲ್ಲಿ ಮಂಜೂರಾತಿ ನೀಡಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ನಿಲುಗಡೆಯಲ್ಲಿರುವ ವಾಹನವು ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ದೇವನಹಳ್ಳಿಗೆ ಹಂಚಿಕೆಯಾಗಿದ್ದು, ಈ ಕಛೇರಿಗೆ ವಾಹನದ ಅವಶ್ಯಕತೆ ಇರುವುದರಿಂದ ದುರಸ್ತಿಗೆ ಕ್ರಮ ಕೈಗೊಳ್ಳಲಾಗಿರುವುದರಿಂದ ಸದರಿ ವಾಹನವು ನಿಲುಗಡೆಯಲ್ಲಿದ್ದು, ದುರಸ್ತಿಯಾಗದೇ ಇನ್ನಷ್ಟು ಹಾನಿಗೊಳಗಾಗುವ ಸಂಭವವಿರುವುದಾಗಿ ತಿಳಿಸಿರುವುದರಿಂದ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ವಾಹನ ದುರಸ್ತಿಗೆ ಹಣ ಮಂಜೂರು ಮಾಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 5 ರೇಯೋವಿ 2007, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2008.**

ಸಾದಿಲ್ವಾರು ವೆಚ್ಚ ಕೈಪಿಡಿ 1958ರ 55ನೇ ನಿಯಮ 40(ಎ) ಉಪನಿಯಮದ 3(ಬಿ)(ಸಿ)ರಲ್ಲಿನ ಮಿತಿಗಳನ್ನು ಸಡಿಲಗೊಳಿಸಿ ಮತ್ತು ಈ ವಾಹನದ ದುರಸ್ತಿಯನ್ನು ಸರ್ಕಾರದಿಂದ ಅಂಗೀಕೃತವಾದ ಕಾರ್ಯಾಗಾರದಿಂದ

ದುರಸ್ತಿಗೊಳಿಸಬೇಕೆಂಬ ಹಾಗೂ ವಾಹನ ದುರಸ್ತಿಯಾದ ನಂತರ ಅದನ್ನು ಆರ್.ಟಿ.ಓ. ಅಧಿಕಾರಿಗಳಿಂದ ತಪಾಸಣೆ ಮಾಡಿಸಿಕೊಂಡು ವರದಿ ಸಲ್ಲಿಸಬೇಕೆಂಬ ಷರತ್ತುಗಳಿಗೆ ಒಳಪಟ್ಟು ಇಲಾಖಾ ವಾಹನ ಸಂಖ್ಯೆ: ಸಿಎಜಿ 7202ರ ದುರಸ್ತಿ ವೆಚ್ಚದ ಬಾಬ್ತು ರೂ. 30,290/– (ಮೂವತ್ತು ಸಾವಿರದ ಇನ್ನೂರ ತೊಂಬತ್ತು ರೂಪಾಯಿಗಳು ಮಾತ್ರ)ಗಳಿಗೆ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2851–00–107–1–01 (ಯೋಜನೇತರ) ರಡಿಯಲ್ಲಿ ಭರಿಸುವುದು.

ಇಲಾಖಾ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 224

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ :** ಶ್ರೀ ಸಿ.ಆರ್. ರಾಮಚಂದ್ರ ಇವರು ಕಾಣೆಯಾಗಿದ್ದು, ಈ ನೌಕರರ ಕುಟುಂಬ ವೇತನ ಮತ್ತಿತರ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ1(1)/ಪ್ರದಸ/ಕಾಣೆ/93/05–06, ದಿ: 17–12–2005, 28–2–2006, 12–9–2006 ಹಾಗೂ 22–7–2007.

2. ಅಧಿಕೃತ ಜ್ಞಾಪನ ಸಂಖ್ಯೆ: ಆಇ (ವಿಶೇಷ) 11 ಕುವಿವೇ 87, ದಿನಾಂಕ 21–3–1988.

**ಪ್ರಸ್ತಾವನೆ :**

ಶ್ರೀ ಸಿ.ಆರ್. ರಾಮಚಂದ್ರ, ಪ್ರಥಮ ದರ್ಜೆ ಸಹಾಯಕರು, ರೇಷ್ಮೆಗೂಡಿನ ಮಾರುಕಟ್ಟೆ, ಸಂತೇಮರಹಳ್ಳಿ ಇವರು ದಿನಾಂಕ 19–12–97ರಂದು ಕರ್ತವ್ಯಕ್ಕೆ ಹಾಜರಾಗಿ ಸದರಿ ದಿನದಿಂದ ಕಾಣೆಯಾಗಿರುತ್ತಾರೆ. ಈ ಬಗ್ಗೆ ಪೊಲೀಸ್ ಠಾಣೆಯಲ್ಲಿ ಪ್ರಕರಣವನ್ನು ದಾಖಲಿಸಿದ್ದು, ಈ ಕುರಿತಂತೆ ತನಿಖೆಯನ್ನು ನಡೆಸಿ ಪತ್ತೆ ಹಚ್ಚಲು 8 ವರ್ಷಗಳಿಂದ ಎಲ್ಲಾ ಪ್ರಯತ್ನಗಳನ್ನು ಮಾಡಿದ್ದು, ನೌಕರರು ಪತ್ತೆಯಾಗದಿರುವುದರಿಂದ ತನಿಖೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿ ಪೊಲೀಸ್ ಇಲಾಖೆಯು ವರದಿ ನೀಡಿರುವುದರಿಂದ ನೌಕರರ ಅವಲಂಬಿತ ಕುಟುಂಬದವರಿಗೆ ನಿಯಮಾನುಸಾರ ಬರಬೇಕಾದ ಆರ್ಥಿಕ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಕಾಣೆಯಾಗಿರುವ ನೌಕರರ ಪತ್ನಿಯು ದಿ: 15–11–2005ರಲ್ಲಿ ಮನವಿ ಸಲ್ಲಿಸಿರುತ್ತಾರೆ ಎಂದು ತಿಳಿಸಿ ಶ್ರೀ ಸಿ.ಆರ್. ರಾಮಚಂದ್ರ, ಪ್ರಥಮ ದರ್ಜೆ ಸಹಾಯಕರು, ದಿನಾಂಕ 19–12–97ರಂದು ಕರ್ತವ್ಯಕ್ಕೆ ಹಾಜರಾಗಿ ನಂತರ ಕಾಣೆಯಾಗಿದ್ದು, ಈ ಬಗ್ಗೆ ಕುದೇರು ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 154/97ರಲ್ಲಿ ದಾಖಲಾಗಿದ್ದು, ಪೊಲೀಸ್ ಇಲಾಖೆಯು ತನಿಖೆ ನಡೆಸಿ ಕಾಣೆಯಾಗಿರುವ ನೌಕರರ ಬಗ್ಗೆ ಕಳೆದ ಎಂಟು ವರ್ಷಗಳಿಂದ ಪತ್ತೆ ಹಚ್ಚಲು ಎಲ್ಲಾ ಪ್ರಯತ್ನಗಳನ್ನು ಮಾಡಿದಾಗ್ಯೂ ವ್ಯಕ್ತಿ ಪತ್ತೆಯಾಗದೇ ಇರುವುದರಿಂದ ಪ್ರಕರಣವನ್ನು ಸ್ಥಾಯಿ ಆದೇಶ ಸಂಖ್ಯೆ: 741ರ ಕಂಡಿಕೆ 14ರ ಪ್ರಕಾರ ತಾತ್ಕಾಲಿಕವಾಗಿ ಸ್ಥಗಿತಗೊಳಿಸಿ ವರದಿ ಸಲ್ಲಿಸಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದನ್ವಯ ಕಾಣೆಯಾದ ನೌಕರರ ಅವಲಂಬಿತರಿಗೆ 7 ವರ್ಷ ಕಳೆದ ನಂತರ ಕುಟುಂಬ ವೇತನ ಮುಂತಾದ ಸೌಲಭ್ಯಗಳನ್ನು ಮಂಜೂರು ಮಾಡಲು ಅವಕಾಶವಿರುವುದರಿಂದ ನೌಕರರ ಕುಟುಂಬದವರಿಗೆ ಕುಟುಂಬ ವೇತನ ಹಾಗೂ ಇತರೆ ಸೌಲಭ್ಯಗಳನ್ನು ಮಂಜೂರು ಮಾಡಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೀಡಿರುವ ಮಾಹಿತಿಯನ್ವಯ ಶ್ರೀ ಸಿ.ಆರ್. ರಾಮಚಂದ್ರ, ಪ್ರಥಮ ದರ್ಜೆ ಸಹಾಯಕರು ಇವರು ದಿ: 19–12–1997ರಂದು ಕರ್ತವ್ಯಕ್ಕೆ ಹಾಜರಾಗಿ ನಂತರ ಅಂದಿನಿಂದ ಕಾಣೆಯಾಗಿದ್ದು, ನೌಕರರು ಕಛೇರಿ ಕೆಲಸಕ್ಕೆ ಹಾಗೂ ನಿವಾಸಕ್ಕೆ ಹಾಜರಾಗದ ಕಾರಣ ನೌಕರರ ಪತ್ನಿಯು ಚಾಮರಾಜನಗರ ಜಿಲ್ಲೆಯ ಕುದೇರು ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದು, ಸದರಿ ದೂರಿನನ್ವಯ ಪೊಲೀಸ್ ಇಲಾಖೆಯು ಪತ್ರಿಕೆ ಪ್ರಕಟಣೆ, ದೂರದರ್ಶನ, ಆಕಾಶವಾಣಿ ಈ ರೀತಿ ಎಲ್ಲಾ ವಿಧದಲ್ಲಿ ನೌಕರರು ಕಾಣೆಯಾಗಿರುವ ಕುರಿತಂತೆ ಪ್ರಕಟಣೆ ನೀಡಿ ತನಿಖೆ ನಡೆಸಿರುತ್ತದೆ. ನಂತರ ದಿನಾಂಕ 21–11–2005ರಲ್ಲಿ ನೌಕರರು ಕಾಣೆಯಾಗಿರುವ ಬಗ್ಗೆ ಪತ್ತೆ ಹಚ್ಚಲು ಎಲ್ಲಾ ಪ್ರಯತ್ನಗಳನ್ನು ಮಾಡಿದಾಗಲೂ ಪತ್ತೆಯಾಗದಿರುವುದರಿಂದ ಪ್ರಕರಣವನ್ನು ದಾಖಲಿಸಿ ಎಂಟು ವರ್ಷಗಳು ಕಳೆದಿರುವುದರಿಂದ, ಪ್ರಕರಣವನ್ನು ತನಿಖಾಧಿಕಾರಿಗಳ ಮನವಿಯ ಮೇರೆಗೆ ಸ್ಥಗಿತಗೊಳಿಸಿರುವುದಾಗಿ ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುವಂತೆ ಕಾಣೆಯಾದ ನೌಕರರ ಅವಲಂಬಿತರಿಗೆ ಕುಟುಂಬ ವೇತನ ಮತ್ತಿತರ ಸೌಲಭ್ಯಗಳನ್ನು ಮಂಜೂರು ಮಾಡುವ ಕುರಿತಂತೆ ಪರಿಶೀಲಿಸಿದ್ದು, ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದನ್ವಯ ಎಲ್ಲಾ ಕ್ರಮಗಳನ್ನು ಪ್ರಸ್ತುತ ಪ್ರಕರಣದಲ್ಲಿ ಕೈಗೊಳ್ಳಲಾಗಿರುವುದರಿಂದ ನೌಕರರ ಅವಲಂಬಿತರಿಗೆ ನಿಯಮಾನುಸಾರ ನೀಡಬೇಕಾಗಿರುವ ಕುಟುಂಬ ವೇತನ ಮತ್ತಿತರ ಸೌಲಭ್ಯಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 28 ರೇಇವಿ 2006, ಬೆಂಗಳೂರು, ದಿನಾಂಕ: 31ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ನೇಮಕಾತಿ ಪ್ರಾಧಿಕಾರವು, ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಇ (ವಿಶೇಷ) 11 ಕುವಿವೇ 87, ದಿನಾಂಕ 21–3–1988ರಲ್ಲಿ ವಿಧಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ, ಶ್ರೀ ಸಿ.ಆರ್. ರಾಮಚಂದ್ರ, ಪ್ರಥಮ ದರ್ಜೆ ಸಹಾಯಕರು, ಇವರ ಕುಟುಂಬದ ಅವಲಂಬಿತರಿಗೆ ಕುಟುಂಬ ವೇತನ ಹಾಗೂ ಮತ್ತಿತರ ಸೌಲಭ್ಯಗಳನ್ನು ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 233

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**PERSONNEL AND ADMINISTRATIVE REFORMS SECRETARIAT**

**No. DPAR 111 SAS 2005, Bangalore dated 5th February 2008.**

**CORRIGENDUM**

**Sub :** Departmental Enquiry against Sri K. Shivaram, IAS –reg.

**Read :** G.O. No. DPAR 111 SAS 2005, dated 17-1-2008.

In the Government Order of even number dated 17-1-2008 cited in the reference on the above subject inthe preamble portion in the third para the following portion shall be and shall always be deemed to have been omitted.

> "Through the Government letter dated 22-8-2007 read at Sl.No. (1) above a notice under rule 8 of AIS (D & A) Rules 1969 was issued to Shri B.H. Anil Kumar, IAS on the following charges pertaining to the issues while he was holding the post of Commissioner, Food & Civil Supplies, Bangalore".

By order and in the name of the President of India,

PR. 250

**K.G. ANANTHA**
Under Secretary to Government,
DPAR (Services-1).

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ದಿವಾನ್ ಪೂರ್ಣಯ್ಯನವರ ಜೀವನ ಮತ್ತು ಸಾಧನೆ ಕುರಿತ ಸಂಶೋಧನಾ ಪ್ರಕಟಣೆಯನ್ನು ಹೊರತರಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ–1/22/ವಿಸ/2007–08, ದಿ: 9–10–2007.

**ಪ್ರಸ್ತಾವನೆ :**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ ಓದಲಾದ ಅವರ ಪತ್ರದಲ್ಲಿ ದಿವಾನ್ ಪೂರ್ಣಯ್ಯನವರ ಜೀವನ ಮತ್ತು ಸಾಧನೆ ಕುರಿತು 2007ರ ಅಕ್ಟೋಬರ್ 6 ಮತ್ತು 7ರಂದು ಮೈಸೂರಿನಲ್ಲಿ ಜರುಗಿದ ವಿಚಾರ ಸಂಕಿರಣದಲ್ಲಿ ವಿದ್ವಾಂಸರಿಂದ ಮಂಡಿಸಲ್ಪಟ್ಟ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ತಂದು ಅವರು ತೀರಿಕೊಂಡ 196 ವರ್ಷಗಳಾದ ದಿನಾಂಕ 27–3–2008ರಂದು ಅವರ ನೆನಪಿಗಾಗಿ ಪ್ರಕಟಿಸಲು ಉದ್ದೇಶಿಸಲಾಗಿದೆ ಎಂದು ವರದಿ ಮಾಡಿದ್ದಾರೆ. ಇದಕ್ಕೆ ರೂ. 75,000/– ವೆಚ್ಚವಾಗಲಿದ್ದು ಇದಕ್ಕೆ ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 276 ಕೆಎಂಯು 2007, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2008.**

ದಿವಾನ್ ಪೂರ್ಣಯ್ಯನವರ ಸಾಧನೆ ಕುರಿತು ಮೈಸೂರಿನಲ್ಲಿ ಜರುಗಿದ ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಕಾರ್ಯಕ್ರಮವನ್ನು ರೂ. 75,000/–ಗಳ ವೆಚ್ಚದಲ್ಲಿ ಕೈಗೊಳ್ಳಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ)059ರಲ್ಲಿನ ಸಂಭವನೀಯ ಉಳಿತಾಯದಲ್ಲಿ ಭರಿಸತಕ್ಕದ್ದು.

